CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೯, ೨೦೦೪ (ಭಾದ್ರಪದ ೧೮, ಶಕ ವರ್ಷ ೧೯೨೬) | ಸಂಚಿಕೆ ೩೭ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಅನುಷ್ಠಾನಗೊಳಿಸುತ್ತಿರುವ ಉದ್ಯೋಗಿನಿ ಯೋಜನೆಯಡಿ ಗರಿಷ್ಟ ಯೋಜನಾ ವೆಚ್ಚವನ್ನು 2004-05ನೇ ಸಾಲಿನಿಂದ ರೂ.50,000/- ಗಳಿಂದ ರೂ.1,00,000/-ಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಪತ್ರ ಸಂಖ್ಯೆ:ಮಅನಿ/ಉ.ಯೋ./ 14/2003-04/5106.ದಿ.3.3.2004.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು 1997-98ನೇ ಸಾಲಿನಿಂದ ರಾಜ್ಯ ಸರ್ಕಾರದ ಯೋಜನೆಯಾದ 'ಉದ್ಯೋಗಿನಿ' ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದೆ. ಆರ್ಥಿಕವಾಗಿ ಹಿಂದುಳಿದ ಮಹಿಳೆಯರನ್ನು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಸಬಲೀಕರಣಗೊಳಿಸಲು ನೆರವಾಗುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.

18 ರಿಂದ 45 ವರ್ಷಗಳ ವಯೋಮಿತಿಯ ಹಾಗೂ ಕುಟುಂಬದ ವಾರ್ಷಿಕ ಆದಾಯ ರೂ. 40,000/-ಕ್ಕೆ ಮೀರದ ಆರ್ಥಿಕವಾಗಿ ಹಿಂದುಳಿದ ಮಹಿಳೆಯರು ಈ ಯೋಜನೆಯಡಿಯಲ್ಲಿ ಸಹಾಯ ಪಡೆದು ಸ್ವ-ಉದ್ಯೋಗಿಗಳಾಗಲು ಅವಕಾಶವಿರುತ್ತದೆ. ವಿಶೇಷ ವರ್ಗದ ಮಹಿಳೆಯರಾದ ಸಂಕಟ ಪರಿಸ್ಥಿತಿಯಲ್ಲಿರುವ ಮಹಿಳೆಯರು ವಿಧವೆಯರು ಮತ್ತು ಅಂಗವಿಕಲ ಮಹಿಳೆಯರಿಗೆ ವಾರ್ಷಿಕ ಆದಾಯ ಮಿತಿ ಇರುವುದಿಲ್ಲ. ಈ ಯೋಜನೆಯಡಿಯಲ್ಲಿ ಮಹಿಳೆಯರು ವ್ಯಾಪಾರ/ಆದಾಯ ಉತ್ಪನ್ನಕರ ಚಟುವಟಿಕೆಗಳಲ್ಲಿ ತೊಡಗಲು ಗರಿಷ್ಟ ಘಟಕದ ವೆಚ್ಚ ರೂ.50,000/- ನಿಗದಿಪಡಿಸಲಾಗಿದೆ. ಸಾಲವನ್ನು ಬ್ಯಾಂಕುಗಳ ಮೂಲಕ ಒದಗಿಸಿಕೊಟ್ಟು ಸಹಾಯಧನವನ್ನು ಈ ನಿಗಮದಿಂದ ನೀಡಲಾಗುತ್ತಿದ್ದು, ಅದರಂತೆ ಮತ್ತು ವಿಶೇಷ ವರ್ಗದ ಮಹಿಳೆಯರಿಗೆ ಗರಿಷ್ಠ ಸಹಾಯಧನ ರೂ.7,500/- ಅಥವಾ ಬ್ಯಾಂಕಿನಿಂದ ಮಂಜೂರಾದ ಸಾಲದ ಶೇಕಡ 30ರಷ್ಟು ಹಾಗೂ ಸಾಮಾನ್ಯ ವರ್ಗದ ಮಹಿಳೆಯರಿಗೆ ಗರಿಷ್ಟ ರೂ.5,000/- ಅಥವಾ ಬ್ಯಾಂಕಿನಿಂದ ಮಂಜೂರಾದ ಸಾಲದ ಶೇಕಡ 20ರಷ್ಟು ಸಹಾಯಧನವನ್ನು ನಿಗಮವು ನೀಡುತ್ತಿದೆ.

ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರು ಮೇಲೆ ಓದಲಾದ ಪತ್ರದೊಂದಿಗೆ ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಹಣದುಬ್ಬರದಿಂದಾಗಿ ಕಚ್ಚಾವಸ್ತುಗಳು ಮತ್ತು ಸೇವೆಗಳು ಇತ್ತೀಚಿನ ದಿನಗಳಲ್ಲಿ ಬಹಳಷ್ಟು ತುಟ್ಟಿಯಾಗಿದ್ದು, ಹಾಗೂ ಉದ್ಯೋಗಿನಿ ಯೋಜನೆಯಡಿ ಯೋಜನಾ ಘಟಕದ ಗರಿಷ್ಠ ವೆಚ್ಚ ರೂ.50,000/- ಗಳನ್ನು 1997-98ನೇ ಸಾಲಿನಲ್ಲಿ ನಿಗದಿಪಡಿಸಿದ್ದು, ಸದರಿ ವೆಚ್ಚವನ್ನು ಪರಿಷ್ಕರಿಸುವ ಅಗತ್ಯವಿದೆಯೆಂದು ತಿಳಿಸಿ 2004-05ನೇ ಸಾಲಿನಿಂದ ಉದ್ಯೋಗಿನಿ ಯೋಜನೆಯಡಿ ಗರಿಷ್ಟ ಯೋಜನಾ ವೆಚ್ಚವನ್ನು ರೂ.50,000/-ಗಳಿಂದ ರೂ. ಒಂದು ಲಕ್ಷಕ್ಕೆ ಹೆಚ್ಚಿಸುವಂತೆ ಹಾಗೂ ಅದಕ್ಕನುಗುಣವಾಗಿ ಸಾಮಾನ್ಯ ವರ್ಗದ ಮಹಿಳೆಯರಿಗೆ ಸಹಾಯಧನವನ್ನು ರೂ.5,000/- ದಿಂದ ರೂ.7,500/- ಗಳಿಗೆ ಅಥವಾ ಬ್ಯಾಂಕಿನಿಂದ ಮಂಜೂರಾದ ಸಾಲದ ಶೇಕಡಾ 20 ಇವೆರಡರಲ್ಲಿ ಯಾವುದು ಕಡಿಮೆಯೋ ಮತ್ತು ವಿಶೇಷ ವರ್ಗದ ಮಹಿಳೆಯರಿಗೆ ಸಹಾಯಧನವನ್ನು ರೂ. 7,500/-ದಿಂದ ರೂ.10,000/-ಗಳಿಗೆ ಅಥವಾ ಬ್ಯಾಂಕಿನಿಂದ ಮಂಜೂರಾದ ಸಾಲದ ಶೇಕಡಾ 30ರಷ್ಟು ಇವೆರಡರಲ್ಲಿ ಯಾವುದು ಕಡಿಮೆಯೋ ಅದನ್ನು ನಿಗಮದಿಂದ ಸಹಾಯಧನವನ್ನಾಗಿ ನೀಡುವ ಬಗ್ಗೆ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿದ್ದಾರೆ. ನಿಗಮದ ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲನೆ ಮಾಡಿ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಅ 32 ಮಅನಿ 2004, ಬೆಂಗಳೂರು, ದಿನಾಂಕ: 6ನೇ ಜುಲೈ 2004**

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಅನುಷ್ಠಾನವಾಗುತ್ತಿರುವ ಉದ್ಯೋಗಿನಿ ಯೋಜನೆಯಡಿ ಗರಿಷ್ಠ ಯೋಜನಾ ವೆಚ್ಚವನ್ನು 2004-05ನೇ ಸಾಲಿನಿಂದ ಜಾರಿಗೆ ಬರುವಂತೆ ರೂ.50,000/- ಗಳಿಂದ ರೂ.1,00,000/- (ರೂಪಾಯಿ ಒಂದು ಲಕ್ಷ)ಕ್ಕೆ ಹೆಚ್ಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಸರ್ಕಾರವು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮಕ್ಕೆ ಯೋಜನೆಯಡಿ ಒದಗಿಸಿರುವ ಆಯವ್ಯಯ ಮಿತಿಯೊಳಗೆ ಸಾಮಾನ್ಯ ವರ್ಗದ ಮಹಿಳೆಯರಿಗೆ ನೀಡುತ್ತಿರುವ ಸಹಾಯಧನವನ್ನು ರೂ.5,000/- ಗಳಿಂದ ರೂ.7,500/-ಗಳಿಗೆ ಹಾಗೂ ವಿಶೇಷ ವರ್ಗದ ಮಹಿಳೆಯರಿಗೆ ನೀಡುತ್ತಿರುವ ಸಹಾಯಧನವನ್ನು ರೂ.7,500/-ಗಳಿಂದ ರೂ.10,000/-ಗಳಿಗೆ ಹೆಚ್ಚಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

2004-05ನೇ ಸಾಲಿನಿಂದ ಅನುಷ್ಠಾನಗೊಳಿಸಬೇಕಾಗಿರುವುದರಿಂದ ಉದ್ಯೋಗಿನಿ ಯೋಜನೆಯ ಮಾರ್ಗಸೂಚಿಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ-1, ಅನುಬಂಧ-1(1) ಮತ್ತು ಅನುಬಂಧ(1) (2) ಅನುಬಂಧ-1 (3)ರಂತೆ ಹೊರಡಿಸಲಾಗಿದೆ. ಈ ಆದೇಶವನ್ನು ದಿನಾಂಕ:30.4.2004ರಂದು ನಡೆದ ಅಧಿಕಾರಿಯುಕ್ತ ಸಮಿತಿ ಸಭೆಯ ತೀರ್ಮಾನದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಮಮಅ 32 ಮಅನಿ 2004, ಬೆಂಗಳೂರು, ದಿನಾಂಕ: 6ನೇ ಜುಲೈ 2004**

**ಅನುಬಂಧ-I**

**2004-05ನೇ ಸಾಲಿಗೆ ಉದ್ಯೋಗಿನಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮಾರ್ಗಸೂಚಿಗಳು**

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ಉದ್ಯೋಗಿನಿ ಯೋಜನೆಯನ್ನು ಆರ್ಥಿಕವಾಗಿ ಹಿಂದುಳಿದ ಮಹಿಳೆಯರು ಸ್ವಯಂ ಉದ್ಯೋಗಿಗಳಾಗಲು 1997-98ನೇ ಸಾಲಿನಿಂದ ಜಾರಿಗೊಳಿಸುತ್ತಿದೆ. ಸರ್ಕಾರದ ಆದೇಶ ಸಂಖ್ಯೆ: ಮಮಅ: 32 ಮಅನಿ: 2004 ದಿನಾಂಕ: 6.7.2004ರಂತೆ ಉದ್ಯೋಗಿನಿ ಯೋಜನೆಯ ರೂಪುರೇಖೆ ಹಾಗೂ ಅನುಷ್ಠಾನಮಾಡುವ ವಿಧಾನ ಮುಂತಾದವುಗಳನ್ನು ಈ ಕೆಳಕಾಣಿಸಿದಂತೆ ಮಾರ್ಪಾಡುಮಾಡಿ 2004-05ನೇ ಸಾಲಿನಿಂದ ಜಾರಿಗೊಳಿಸಲಾಗುತ್ತದೆ.

1. ಗರಿಷ್ಠ ಯೋಜನಾ ವೆಚ್ಚವನ್ನು ರೂ.50,000/- ದಿಂದ ರೂ. 1,00,000/-ಕ್ಕೆ ಹೆಚ್ಚಿಸಲಾಗಿದೆ.
2. ಸಾಮಾನ್ಯ ವರ್ಗದ ಮಹಿಳೆಗೆ ಈ ಯೋಜನೆಯಡಿಯ ಸಹಾಯಧನವನ್ನು ಯೋಜನಾ ವೆಚ್ಚದ ಶೇ.20 ರಷ್ಟು ಅಥವಾ ಗರಿಷ್ಠ ರೂ. 7,500/-ಗಳಿಗೆ ಮೀರದಂತೆ (ಇವುಗಳಲ್ಲಿ ಯಾವುದು ಕಡಿಮೆಯೋ) ಮತ್ತು ವಿಶೇಷ ವರ್ಗದ ಮಹಿಳೆಗೆ (ಪ.ಜಾ : ಪ.ಪಂ : ವಿಧವೆ : ಅಂಗವಿಕಲರು : ಸಂಕಷ್ಟಕ್ಕೊಳಗಾದ ಮಹಿಳೆಯರು) ಯೋಜನಾ ವೆಚ್ಚದ ಶೇ 30 ರಷ್ಟು ಅಥವಾ ಗರಿಷ್ಠ ರೂ.10,000/-ಗಳಿಗೆ ಮೀರದಂತೆ (ಇವುಗಳಲ್ಲಿ ಯಾವುದು ಕಡಿಮೆಯೋ) ನಿಗಮದಿಂದ ನೀಡಲಾಗುವುದು ಹಾಗೂ ಯೋಜನಾ ವೆಚ್ಚದ ಉಳಿಕೆ ಮೊತ್ತವನ್ನು ಬ್ಯಾಂಕಿನ ಮೂಲಕ ಸಾಲದ ರೂಪದಲ್ಲಿ ನೀಡಲಾಗುವುದು. ಬ್ಯಾಂಕುಗಳು ಮಂಜೂರು ಮಾಡಿ ಬಿಡುಗಡೆ ಮಾಡುವ ಸಾಲದ ಮೊತ್ತಕ್ಕೆ ಅನುಗುಣವಾಗಿ ಮೇಲೆ ತಿಳಿಸಿದಂತೆ ಸಹಾಯಧನವನ್ನು ಬಿಡುಗಡೆ ಮಾಡತಕ್ಕದ್ದು.
3. ಅರ್ಜಿದಾರರು 18 ರಿಂದ 45 ವರ್ಷಗಳ ವಯೋಮಿತಿಯವರಾಗಿರತಕ್ಕದ್ದು.
4. ಆದಾಯ ಮಿತಿ : ಅರ್ಜಿದಾರರ ಕೌಟುಂಬಿಕ ವಾರ್ಷಿಕ ಆದಾಯ (ಎಲ್ಲಾ ವರ್ಗದ ಮಹಿಳೆಯರಿಗೆ ಅನ್ವಯ) ರೂ. 40000/- ಗಳಿಗೆ ಮೀರಿರಬಾರದು. ಹಾಗೂ ಇದಕ್ಕೆ ಸಂಬಂಧಪಟ್ಟಂತೆ ಆದಾಯ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ತಹಶೀಲ್ದಾರರಿಂದ ಪಡೆದು ಸಲ್ಲಿಸುವುದು. ಸಂಕಷ್ಟ ಪರಿಸ್ಥಿತಿಯಲ್ಲಿರುವ ಮಹಿಳೆಯರಿಗೆ, ಅಂಗವಿಕಲರಿಗೆ ಹಾಗೂ ವಿಧವೆಯರಿಗೆ ಯಾವುದೇ ಆದಾಯ ಮಿತಿ ಇರುವುದಿಲ್ಲ.
5. ಸರ್ಕಾರದ ಆದೇಶ ಸಂಖ್ಯೆ: ಮಮಇ:145:ಮಮಅಕ:99 ದಿನಾಂಕ:20.3.2000 ರಂತೆ, ರಾಷ್ಟ್ರೀಕೃತ ಬ್ಯಾಂಕುಗಳ ಜೊತೆಗೆ ಜಿಲ್ಲಾ ಕ್ರೆಡಿಟ್ ಕೋ ಆಪರೇಟಿವ್ ಬ್ಯಾಂಕ್ ಮತ್ತು ಮಹಿಳಾ ಕೋ ಆಪರೇಟಿವ್ ಬ್ಯಾಂಕುಗಳ ಮೂಲಕವೂ ಸಾಲವನ್ನು ಒದಗಿಸಲಾಗುವುದು.
6. ಮಹಿಳೆಯರು ಈ ಯೋಜನೆಯಡಿಯಲ್ಲಿ ಸ್ವಂತ ಉದ್ಯೋಗ ಮಾಡಲು ಕೈಗೆತ್ತಿಕೊಳ್ಳಬಹುದಾದ ಚಟುವಟಿಕೆಗಳ ಪಟ್ಟಿಯನ್ನು ಅನುಬಂಧ-I (3)ರಲ್ಲಿ ಲಗತ್ತಿಸಿದೆ. ಈ ಚಟುವಟಿಕೆಗಳಲ್ಲದೆ ಇತರೆ ಲಾಭದಾಯಕರವಾದ ಚಟುವಟಿಕೆಗಳನ್ನೂ ಸಹ ಕೈಗೆತ್ತಿಕೊಳ್ಳಬಹುದಾಗಿದೆ.
7. ಅರ್ಹತೆ: ಈ ಯೋಜನೆಯಡಿಯಲ್ಲಿ ನೂತನವಾಗಿ ಸ್ಥಾಪಿಸುವಂತಹ ಘಟಕಗಳಿಗೆ ಮಾತ್ರ ಆರ್ಥಿಕ ಸಹಾಯ ಒದಗಿಸಲಾಗುವುದು. ಈಗಾಗಲೇ ಅಸ್ತಿತ್ವದಲ್ಲಿರುವ ಅಥವಾ ವಿಸ್ತರಿಸುವಂತಹ ಚಟುವಟಿಕೆಗಳನ್ನು ಪರಿಗಣಿಸಲು ಅವಕಾಶ ವಿರುವುದಿಲ್ಲ. ಅಸ್ತಿತ್ವದಲ್ಲಿರುವ ಅಥವಾ ವಿಸ್ತರಿಸುವಂತಹ ಚಟುವಟಿಕೆಗಳಿಗೆ ಸಹಾಯ ಧನ ಬಿಡುಗಡೆ ಮಾಡಿದಲ್ಲಿ ಅಂತಹ ಸಹಾಯಧನವನ್ನು ಸಹಾಯಕ ನಿರ್ದೇಶಕರು / ಉಪ ನಿರ್ದೇಶಕರು / ಫಲಾನುಭವಿಯು ನಿಗಮಕ್ಕೆ ಬಡ್ಡಿ ಸಮೇತ ಮರುಪಾವತಿ ಮಾಡಬೇಕಾಗುತ್ತದೆ.
8. ಉದ್ಯೋಗಿನಿ ಯೋಜನೆಯ ರೂಪುರೇಷೆಗಳ ಬಗ್ಗೆ ಉಪ ನಿರ್ದೇಶಕರು / ಸಹಾಯಕ ನಿರ್ದೇಶಕರು/ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ತಮ್ಮ ಕಛೇರಿಯ ನೋಟೀಸ್ ಬೋರ್ಡಿನಲ್ಲಿ ಪ್ರಕಟಿಸತಕ್ಕದ್ದು.

9. ಉದ್ಯೋಗಿನಿ ಯೋಜನೆಯನ್ನು ರಾಜ್ಯದಾದ್ಯಂತ ಅನುಷ್ಠಾನಗೊಳಿಸಲು ಕ್ರಿಯಾ ಯೋಜನೆ ತಯಾರಿಸಿದ್ದು ಜಿಲ್ಲಾವಾರು ಗುರಿಯನ್ನು ಅನುಬಂಧ-I (7) ರಲ್ಲಿ ನೀಡಲಾಗಿದೆ.

**ಈ ಯೋಜನೆಯನ್ನು ಕಾರ್ಯರೂಪಕ್ಕೆ ತರುವ ವಿಧಾನ:**

ಪ್ರತಿ ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಯೋಜನೆಯ ಅನುಷ್ಠಾನಾಧಿಕಾರಿಗಳಾಗಿರುತ್ತಾರೆ. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಜಿಲ್ಲಾ ವಾರ್ತಾ ಮತ್ತು ಪ್ರಚಾರ ಇಲಾಖೆಯ, ಮುಖಾಂತರ ಸ್ಥಳೀಯ ದಿನ ಪತ್ರಿಕೆಗಳಲ್ಲಿ, ಆಕಾಶವಾಣಿ ಮತ್ತು ಉದ್ಯೋಗ ವಿನಿಮಯ ಕೇಂದ್ರ ಹಾಗೂ ತಾಲ್ಲೋಕಿನ ಮುಖ್ಯ ಕಛೇರಿಗಳಲ್ಲಿ ಸೂಚನಾ ಫಲಕಗಳ ಮೂಲಕ ಪ್ರಚಾರ ನೀಡಿ ಅರ್ಜಿಗಳನ್ನು ಆಹ್ವಾನಿಸುವುದು. ಅರ್ಜಿಗಳನ್ನು ಪರಿಶೀಲಿಸುವಾಗ ಗಮನಿಸಬೇಕಾದ ಅಂಶಗಳನ್ನು ಅನುಬಂಧ-I (1)ರಲ್ಲಿ ನೀಡಲಾಗಿದೆ. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಯಿಂದ ನೇರವಾಗಿ ಅರ್ಜಿಗಳ ಅರ್ಹಫಲಾನುಭವಿಗಳಿಗೆ ವಿತರಿಸತಕ್ಕದ್ದು. ನಿಗದಿತ ದಿನಾಂಕದೊಳಗೆ ಸ್ವೀಕರಿಸಲ್ಪಟ್ಟ ಅರ್ಜಿಗಳನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿರವರು ಪರಿಶೀಲಿಸಿ, ಸ್ಥಳ ತಪಾಸಣೆಮಾಡಿ, ಸಂದರ್ಶನದ ಮೂಲಕ ಆಯ್ಕೆ ಮಾಡುವುದು. ಅರ್ಜಿದಾರರಿಂದ ಸಂದರ್ಶನದ ವೇಳೆಯಲ್ಲಿ ಪಡೆಯಬೇಕಾದ ಮಾಹಿತಿಯನ್ನು ಅನುಬಂಧ-I (2)ರಲ್ಲಿ ನೀಡಲಾಗಿದೆ. ಸಂದರ್ಶನಾ ಸಮಿತಿಯು ಈ ಕೆಳಗಿನ ಸದಸ್ಯರನ್ನು ಒಳಗೊಂಡಿರುತ್ತದೆ.

1. ಉಪ ನಿರ್ದೇಶಕರು/ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಅಧ್ಯಕ್ಷರು
2. ಲೀಡ್ ಬ್ಯಾಂಕ್ ಮ್ಯಾನೇಜರ್ : ಸದಸ್ಯರು.
3. ಸಂಬಂಧಪಟ್ಟ ಸೇವಾ ಕ್ಷೇತ್ರದ ಬ್ಯಾಂಕಿನ ಮ್ಯಾನೇಜರ್ : ಸದಸ್ಯರು (ಬೆಂಗಳೂರು ನಗರ ಜಿಲ್ಲೆ ಹೊರತುಪಡಿಸಿ) ಬೆಂಗಳೂರು ನಗರ ಜಿಲ್ಲೆಯಲ್ಲಿ ಸಂಚಾಲಕರು BLBC ಯವರು ಸದಸ್ಯರಾಗಿರುತ್ತಾರೆ.
4. ನಬಾರ್ಡ್ ಪ್ರತಿನಿಧಿಗಳು : ಸದಸ್ಯರು
5. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು : ಸದಸ್ಯ ಕಾರ್ಯದರ್ಶಿ

ಆಯ್ಕೆ ಸಮಿತಿಯ ಶಿಫಾರಸ್ಸು ಮಾಡಿದ ಫಲಾನುಭವಿಗಳ ಅರ್ಜಿಗಳನ್ನು ಸಾಲ ಮಂಜೂರು ಮಾಡಲು ಆಯಾಸೇವಾ ಕ್ಷೇತ್ರದ ಬ್ಯಾಂಕುಗಳಿಗೆ ಕಳುಹಿಸತಕ್ಕದ್ದು. ಬ್ಯಾಂಕುಗಳು ಸಾಲ ಮಂಜೂರು ಮಾಡಿದ ನಂತರ ಸಹಾಯಕ ನಿರ್ದೇಶಕರು/ ಉಪ ನಿರ್ದೇಶಕರವರು ಸಹಾಯ ಧನವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ನೇರವಾಗಿ ಬಿಡುಗಡೆ ಮಾಡತಕ್ಕದ್ದು.

ಉದ್ಯೋಗಿನಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಧಿ ನಿಗದಿಪಡಿಸಲಾಗಿದ್ದು ಇದರ ವಿವರವನ್ನು ಅನುಬಂಧ-I (4)ರಲ್ಲಿ ನೀಡಲಾಗಿದೆ.

ಉದ್ಯೋಗಿನಿ ಯೋಜನೆಯ ಮಾಸಿಕ ಪ್ರಗತಿ ವರದಿಯನ್ನು ಅನುಬಂಧ-I (5) ಮತ್ತು-I (6)ರಲ್ಲಿ ತಿಳಿಸಿರುವಂತೆ ಪ್ರತಿ ತಿಂಗಳು 5ನೇ ತಾರೀಖಿನೊಳಗೆ ತಪ್ಪದೆ ನಿಗಮಕ್ಕೆ ಕಳುಹಿಸಿಕೊಡತಕ್ಕದ್ದು.

ಉದ್ಯೋಗಿನಿ ಫಲಾನುಭವಿಗಳನ್ನು ಗುರುತಿಸುವ ದೃಷ್ಟಿಯಿಂದ ಉದ್ಯಮ ಸ್ಥಾಪಿಸುವ ಜಾಗದಲ್ಲಿ **ಉದ್ಯಮವು ಕ.ರಾ.ಮ.ಅ.ನಿಗಮದಿಂದ ಉದ್ಯೋಗಿನಿ ಯೋಜನೆಯಡಿ** ಸ್ಥಾಪಿಸಲ್ಪಟ್ಟಿದೆ ಎಂದು ನಾಮ ಫಲಕವನ್ನು ಕಡ್ಡಾಯವಾಗಿ ಹಾಕಿಸುವುದು.

ನಿಗಮದ ಮಹಿಳಾ ತರಬೇತಿ ಯೋಜನೆಯಡಿ, ಲಂಬಾಣಿ ಕಸೂತಿ ಯೋಜನೆಯಡಿ ತರಬೇತಿ ಪಡೆದ ಫಲಾನುಭವಿಗಳಿಗೆ ಸಾಲ ಮಂಜೂರಾತಿಯಲ್ಲಿ ಆದ್ಯತೆ ನೀಡುವುದು.

ಈ ಯೋಜನೆಯಡಿ ಸಹಾಯ ಪಡೆದ ಫಲಾನುಭವಿಗಳನ್ನು ಪ್ರತಿ 6 ತಿಂಗಳಿಗೊಮ್ಮೆ ತಾಲ್ಲೂಕು ಮಟ್ಟದಲ್ಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ನೇತೃತ್ವದಲ್ಲಿ ಸಭೆ ಕರೆದು ಫಲಾನುಭವಿಗಳಿಗೆ ಬ್ಯಾಂಕುಗಳಿಂದ ಸಾಲ ವಿತರಣೆಯಲ್ಲಿ ಆಗಿರಬಹುದಾದ ವಿಳಂಬಕ್ಕೆ ಸಂಬಂಧಪಟ್ಟಂತೆ ಅಥವಾ ಸಾಲ ಮರುಪಾವತಿಗೆ ಸಂಬಂಧಪಟ್ಟಂತೆ ಸಮಸ್ಯೆಗಳಿದ್ದಲ್ಲಿ ಸಂಬಂಧಪಟ್ಟ ಬ್ಯಾಂಕುಗಳ ಪ್ರತಿನಿಧಿಗಳನ್ನು ಸದರಿ ಸಭೆಗೆ ಆಹ್ವಾನಿಸಿ ಚರ್ಚಿಸಿ ಪರಿಹಾರ ನೀಡುವುದು. ಸದರಿ ಯೋಜನೆಯಡಿ ಸಹಾಯ ಪಡೆದು ಯಶಸ್ವಿಯಾದ ಮಹಿಳೆಯರಿದ್ದಲ್ಲಿ ಅಂಥವರ ಯಶೋಗಾಥೆಯನ್ನು ನಿಗಮಕ್ಕೆ ವರದಿ ಮೂಲಕ ಸಲ್ಲಿಸುವುದು.

**ಉದ್ಯೋಗಿನಿ ಯೋಜನೆಯಡಿ ಸಹಾಯ ಧನವನ್ನು ಮಂಜೂರು ಮಾಡುವಾಗ ಈ ಕೆಳಕಾಣಿಸಿದಂತೆ ಸೂಚನೆಯನ್ನು ಪಾಲಿಸತಕ್ಕದ್ದು:**

1. ಬ್ಯಾಂಕುಗಳು ಮಂಜೂರು ಮಾಡಿ ಬಿಡುಗಡೆ ಮಾಡುವ ಸಾಲದ ಮೊತ್ತಕ್ಕೆ ಅನುಗುಣವಾಗಿ ಸಾಮಾನ್ಯ ವರ್ಗದ ಮಹಿಳೆಗೆ ಸಹಾಯಧನವನ್ನು ಯೋಜನಾ ವೆಚ್ಚದ ಶೇ.20 ರಷ್ಟು ಅಥವಾ ಗರಿಷ್ಠ ರೂ. 7500ಕ್ಕೆ ಮೀರದಂತೆ ಇದರಲ್ಲಿ ಯಾವುದು ಕಡಿಮೆಯೋ ಮತ್ತು ವಿಶೇಷ ವರ್ಗದವರಿಗೆ (ಪ.ಜಾ : ಪ.ಪಂ : ವಿಧವೆ : ಅಂಗವಿಕಲರು : ಸಂಕಷ್ಟಕ್ಕೊಳಗಾದ ಮಹಿಳೆಯರು) ಯೋಜನಾ ವೆಚ್ಚದ ಶೇ 30 ರಷ್ಟು ಅಥವಾ ಗರಿಷ್ಠ ರೂ. 10,000/-ಕ್ಕೆ ಮೀರದಂತೆ ಇದರಲ್ಲಿ ಯಾವುದು ಕಡಿಮೆಯೋ ಅದರಂತೆ ಸಹಾಯಧನ ಬಿಡುಗಡೆ ಮಾಡತಕ್ಕದ್ದು. ಬ್ಯಾಂಕುಗಳು ಸಾಲವನ್ನು ಸಂಪೂರ್ಣವಾಗಿ ಫಲಾನುಭವಿಗೆ ನೀಡಿದ ಬಗ್ಗೆ ಖಾತರಿಪಡಿಸಿಕೊಳ್ಳತಕ್ಕದ್ದು. ಬ್ಯಾಂಕಿನವರು ಸಹಾಯಧನವನ್ನು Backend Subsidy ಎಂದು ಪರಿಗಣಿಸುವುದು. ಬ್ಯಾಂಕಿನವರು ಸಾಲದ ಮಂಜೂರಾತಿ ಮಾಡಿದ ಬಗ್ಗೆ ಆದೇಶವನ್ನು ನೀಡಿ ಸಾಲದ ಮರುಪಾವತಿಯನ್ನು 36 ಮಾಸಿಕ ಕಂತುಗಳಲ್ಲಿ ವಸೂಲಿ ಮಾಡತಕ್ಕದ್ದು.
2. ಬ್ಯಾಂಕುಗಳಿಂದ ಸಾಲ ಮಂಜೂರಾದ ನಂತರ - ಸಾಲ ಬಿಡುಗಡೆಯಾಗುವ ಮುನ್ನ ಫಲಾನುಭವಿಗಳಿಗೆ ನಿಗದಿತ ತರಬೇತಿ ಸಂಸ್ಥೆಗಳ ಮೂಲಕ ಮೂರು ದಿನಗಳ ಉದ್ಯಮಶೀಲತಾ ಅಭಿವೃದ್ಧಿ ತರಬೇತಿಯನ್ನು ಏರ್ಪಡಿಸತಕ್ಕದ್ದು. ಈ ತರಬೇತಿಯು ಖಡ್ಡಾಯವಾಗಿದ್ದು ಆ ನಂತರವೇ ಸಾಲ ಬಿಡುಗಡೆಯಾಗುವಂತೆ ಉಪ ನಿರ್ದೇಶಕರು / ಸಹಾಯಕ ನಿರ್ದೇಶಕರು ಜಾಗ್ರತಿ ವಹಿಸತಕ್ಕದ್ದು.

3. ಫಲಾನುಭವಿಯು ಯಾವ ಉದ್ದೇಶಕ್ಕೆ ಸಾಲ ಪಡೆದಿರುತ್ತಾರೋ ಅದೇ ಉದ್ದೇಶಕ್ಕೆ ಸಾಲವನ್ನು ಉಪಯೋಗಿಸಿಕೊಂಡಿರುವರೇ ಎಂಬ ಬಗ್ಗೆ ತಪಾಸಣೆ ನಡೆಸಿ ಖಾತರಿಪಡಿಸಿಕೊಳ್ಳತಕ್ಕದ್ದು.
4. ಸಾಲವನ್ನು ಫಲಾನುಭವಿಗೆ ಬಿಡುಗಡೆ ಮಾಡಿದ ಬಗ್ಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸಹಾಯಧನ ಉಪಯುಕ್ತತಾ ಪ್ರಮಾಣ ಪತ್ರವನ್ನು ಬ್ಯಾಂಕುಗಳಿಂದ ಪಡೆಯುವುದು. ಪಡೆದಂತಹ ಉಪಯುಕ್ತತಾ ಪ್ರಮಾಣ ಪತ್ರಗಳನ್ನು ಏಪ್ರಿಲ್ 2005ನೇ ಮಾಹೆಯೊಳಗೆ ತಪ್ಪದೇ ನಿಗಮದ ಕಛೇರಿಗೆ ಸಲ್ಲಿಸತಕ್ಕದ್ದು.
5. ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು ಸದರೀ ವರ್ಷದಲ್ಲಿ ಮಂಜೂರು ಮಾಡಿದ ಎಲ್ಲಾ ಉದ್ಯೋಗಿನಿ ಫಲಾನುಭವಿಗಳ ಸ್ಥಳ ತಪಾಸಣೆ ಮಾಡಿ ಆಸ್ತಿಯನ್ನು ಸೃಷ್ಟಿಸಲಾಗಿದೆಯೇ, ಸಾಲವನ್ನು ಸದುಪಯೋಗಪಡಿಸಿಕೊಂಡಿರುವರೇ ಎಂಬ ಬಗ್ಗೆ ನಿಗಮಕ್ಕೆ ಏಪ್ರಿಲ್ 2006ರ ಮಾಹೆಯೊಳಗೆ ವರದಿ ಸಲ್ಲಿಸತಕ್ಕದ್ದು.
6. ಸಾಲದ ಮೊತ್ತವನ್ನು ದುರುಪಯೋಗಪಡಿಸಿಕೊಂಡಿದ್ದಲ್ಲಿ ಈ ಬಗ್ಗೆ ಸಾಲದ ಮೊತ್ತವನ್ನು ವಸೂಲು ಮಾಡಲು ಸೂಕ್ತ ಕ್ರಮವನ್ನು ಕೈಗೊಳ್ಳತಕ್ಕದ್ದು.
7. ಬಡವರಲ್ಲಿ ಕಡುಬಡವರು, ವಿಧವೆಯರು, ಸಂಕಷ್ಟದಲ್ಲಿರುವ ಮಹಿಳೆಯರು, ಅಂಗವಿಕಲರು ಮತ್ತು ಕುಶಲಕರ್ಮಿಗಳು ಸ್ವಶಕ್ತಿ ಮತ್ತು ಸ್ತ್ರೀಶಕ್ತಿ ಯೋಜನೆಯ ಸ್ವಸಹಾಯ ಗುಂಪುಗಳ ಸದಸ್ಯರು ಈ ಯೋಜನೆಯ ಪ್ರಯೋಜನ ಪಡೆಯುವಂತೆ ಕ್ರಮ ಕೈಗೊಳ್ಳುವುದು.
8. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಉಪ ನಿರ್ದೇಶಕರು / ಸಹಾಯಕ ನಿರ್ದೇಶಕರು ಈ ಯೋಜನೆಯನ್ನು ನಿಯಮಾನುಸಾರ ಸಮರ್ಪಕ ರೀತಿಯಲ್ಲಿ ಅನುಷ್ಠಾನಗೊಳಿಸುವಲ್ಲಿ ವೈಯಕ್ತಿಕ ಹೊಣೆಗಾರರಾಗಿರುತ್ತಾರೆ.
9. ಸಾಲದ ಅರ್ಜಿಯೊಂದಕ್ಕೆ ರೂ.5/-ರಂತೆ ಶುಲ್ಕವನ್ನು ವಸೂಲಿ ಮಾಡಿ ನಿಗಮಕ್ಕೆ ಕ್ರೋಢೀಕೃತ ಮೊತ್ತವನ್ನು ಸೆಪ್ಟೆಂಬರ್ - 2004ರ ಅಂತ್ಯದೊಳಗೆ ಪಾವತಿಸತಕ್ಕದ್ದು.

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

**ಅನುಬಂಧ-I (1)**

**ಉದ್ಯೋಗಿನಿ ಅರ್ಜಿಗಳನ್ನು ಪರಿಶೀಲಿಸುವಾಗ ಗಮನಿಸಬೇಕಾದ ಅಂಶಗಳು**

1. ಅರ್ಜಿದಾರರ ವಯಸ್ಸು 18 ರಿಂದ 45ರೊಳಗೆ ಇರುವ ಬಗ್ಗೆ.
2. **ಆದಾಯ ಮಿತಿ :** ಮಹಿಳೆಯರ ಕೌಟುಂಬಿಕ ವಾರ್ಷಿಕ ಆದಾಯ ರೂ. 40,000ಗಳಿಗೆ ಮೀರಿರಬಾರದು ಹಾಗೂ ಇದಕ್ಕೆ ಸಂಬಂಧಪಟ್ಟಂತೆ ಆದಾಯ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ತಹಶೀಲ್ದಾರರಿಂದ ಸಲ್ಲಿಸುವುದು. ಸಂಕಷ್ಟ ಪರಿಸ್ಥಿತಿಯಲ್ಲಿರುವ ಮಹಿಳೆಯರಿಗೆ, ಅಂಗವಿಕಲರಿಗೆ ಹಾಗೂ ವಿಧವೆಯರಿಗೆ ಯಾವುದೇ ಆದಾಯ ಮಿತಿ ಇರುವುದಿಲ್ಲ.
3. ಅರ್ಜಿದಾರರು ಕೈಗೊಳ್ಳಬಹುದಾದ ವ್ಯಾಪಾರ:ಉದ್ಯಮ ಈಗಾಗಲೇ ಅಸ್ತಿತ್ವದಲ್ಲಿದೆಯೇ? ಅಥವಾ ಹೊಸತಾಗಿ ಪ್ರಾರಂಭಿಸಲಿರುವರೇ? ಈಗಾಗಲೇ ಅಸ್ತಿತ್ವದಲ್ಲಿದ್ದಲ್ಲಿ ಅಂತಹ ಅರ್ಜಿಯನ್ನು ತಿರಸ್ಕರಿಸುವುದು.
4. ಅರ್ಜಿದಾರರು ಈ ಕೆಳಕಾಣಿಸಿದ ದಾಖಲಾತಿಗಳೊಂದಿಗೆ ಅರ್ಜಿಯನ್ನು ಸಲ್ಲಿಸಿರಬೇಕು.

   ಅ. ಇತ್ತೀಚಿನ ಭಾವ ಚಿತ್ರ.

   ಆ. ಆದಾಯ ಪ್ರಮಾಣ ಪತ್ರವನ್ನು ಸಾಮಾನ್ಯ ವರ್ಗ:ಎಸ್.ಸಿ:ಎಸ್.ಟಿ ಪಂಗಡದವರು ಸಂಬಂಧಪಟ್ಟ ತಹಶೀಲ್ದಾರರಿಂದ ದೃಢೀಕರಿಸಿ ಸಲ್ಲಿಸತಕ್ಕದ್ದು. ಅಂಗವಿಕಲರು : ವಿಧವೆಯರು : ಸಂಕಷ್ಟದಲ್ಲಿರುವ ಮಹಿಳೆಯರು ಆದಾಯ ಪ್ರಮಾಣ ಪತ್ರ ನೀಡುವ ಅವಶ್ಯಕತೆ ಇರುವುದಿಲ್ಲ. ಆದರೆ ಅರ್ಜಿದಾರಳು ವಿಧವೆ, ಅಂಗವಿಕಲೆ ಅಥವಾ ಸಂಕಷ್ಟದಲ್ಲಿರುವ ಮಹಿಳೆ ಎಂಬ ಬಗ್ಗೆ ಸಮರ್ಥನ ಪತ್ರದ ದಾಖಲಾತಿ ತಪ್ಪದೆ ಒದಗಿಸಿರಬೇಕು.
5. ಅಭ್ಯರ್ಥಿಯು ಕೈಗೊಳ್ಳಬಹುದಾದ ಉದ್ದಿಮೆ : ವ್ಯಾಪಾರದ ಯೋಜನಾ ವರದಿಯನ್ನು ಅರ್ಜಿಯಲ್ಲಿ ನೀಡಿರುವಂತೆ ತುಂಬಿ ಸಲ್ಲಿಸತಕ್ಕದ್ದು.
6. ಬಡವರಲ್ಲಿ ಕಡು ಬಡವರು, ವಿಧವೆಯರು, ಸಂಕಷ್ಟದಲ್ಲಿರುವ ಮಹಿಳೆಯರು, ಅಂಗವಿಕಲರು ಮತ್ತು ಕುಶಲ ಕರ್ಮಿಗಳಿದ್ದಲ್ಲಿ ಈ ಯೋಜನೆಯ ಪ್ರಯೋಜನ ಪಡೆಯಲು ಆದ್ಯತೆ ನೀಡುವುದು. ಅಲ್ಲದೆ ಈ ನಿಗಮದಿಂದ ಹಾಗೂ ಇತರೆ ಇಲಾಖೆಗಳಿಂದ ವೃತ್ತಿಪರ / ಕೌಶಲ್ಯ ಅಭಿವೃದ್ಧಿ ತರಬೇತಿಯನ್ನು ಪಡೆದ ಅಭ್ಯರ್ಥಿಗಳಿಗೆ ಸದರಿ ಯೋಜನೆಯಲ್ಲಿ ಆದ್ಯತೆ ನೀಡುವುದು. ಹಾಗೂ ನಿಗಮದ ವತಿಯಿಂದ ವಿಶ್ವಬ್ಯಾಂಕ್ ನೆರವಿನ ಯೋಜನೆಯಡಿ ಅನುಷ್ಠಾನಮಾಡುತ್ತಿರುವ ಸ್ವಶಕ್ತಿ ಯೋಜನೆಯ ಹಾಗೂ ಇಲಾಖೆ ಅನುಷ್ಠಾನಗೊಳಿಸುತ್ತಿರುವ ಸ್ತ್ರೀಶಕ್ತಿ ಯೋಜನೆಯ ಸ್ವಸಹಾಯ ಗುಂಪುಗಳ ಸದಸ್ಯರಿಗೆ ಅನುಕೂಲವಾಗುವಂತೆ ಒಟ್ಟಾರೆ ಗರಿಷ್ಠ ಶೇ. 10 ರಷ್ಟು ಗುರಿ ನೀಡಲಾಗಿದೆ.

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

**ಅನುಬಂಧ-I (2)**

**ಸಂದರ್ಶನ ವೇಳೆಯಲ್ಲಿ ಅರ್ಜಿದಾರರ ಬಗ್ಗೆ ಗಮನಿಸಬೇಕಾದ ಅಂಶಗಳು**

1. ಫಲಾನುಭವಿಯ ಕೌಟುಂಬಿಕ ಹಿನ್ನೆಲೆ ಹಾಗೂ ಆರ್ಥಿಕವಾಗಿ ಹಿಂದುಳಿದವರೇ ಎಂಬ ಬಗ್ಗೆ.

2. ಫಲಾನುಭವಿಯು ಈ ನಿಗಮದ ಅಥವಾ ಇತರೆ ಇಲಾಖೆಗಳಿಂದ ವೃತ್ತಿಪರ/ ಕೌಶಲ್ಯ ಅಭಿವೃದ್ಧಿ : ತರಬೇತಿಯನ್ನು ಪಡೆದಿರುವರೇ ಎಂಬ ಬಗ್ಗೆ. ಹಾಗಿದ್ದಲ್ಲಿ ಅಂತಹವರಿಗೆ ಆದ್ಯತೆ ನೀಡುವುದು.
3. ಫಲಾನುಭವಿಯು ಕೈಗೊಳ್ಳಬಹುದಾದ ವ್ಯಾಪಾರ : ಉದ್ಯಮ ಈಗಾಗಲೇ ಅಸ್ತಿತ್ವದಲ್ಲಿಯೇ ಅಥವಾ ಹೊಸದಾಗಿ ಪ್ರಾರಂಭಿಸಲಿರುವರೇ. ಈಗಾಗಲೇ ಘಟಕವು ಅಸ್ತಿತ್ವದಲ್ಲಿದ್ದಲ್ಲಿ ಅಂತಹ ಅರ್ಜಿಯನ್ನು ತಿರಸ್ಕರಿಸುವುದು.
4. ಫಲಾನುಭವಿಯು ಕೈಗೊಳ್ಳಬಹುದಾದ ವ್ಯಾಪಾರ : ಉದ್ಯಮ ಲಾಭದಾಯಕವಾಗಿದೆಯೇ : ತಯಾರಿಸುವ ವಸ್ತುಗಳಿಗೆ ಸಾಕಷ್ಟು ಬೇಡಿಕೆ ಇದೆಯೇ ಎಂಬ ಬಗ್ಗೆ.
5. ಫಲಾನುಭವಿಯು ಕೈಗೊಳ್ಳಬಹುದಾದ ವ್ಯಾಪಾರ ಉದ್ಯಮದಲ್ಲಿ ಅವರಿಗಿರುವ ಅನುಭವದ ಬಗ್ಗೆ.

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

**ಅನುಬಂಧ-। (3)**

**ಉದ್ಯೋಗಿನಿ ಯೋಜನೆಯಡಿ ಕೈಗೆತ್ತಿಕೊಳ್ಳಬಹುದಾದ ಚಟುವಟಿಕೆಗಳ ಪಟ್ಟಿ (ಈ ಪಟ್ಟಿ ಕೇವಲ ನಿದರ್ಶನವಾಗಿದೆ)**

1. ನೋಟ್ ಬುಕ್ ತಯಾರಿಕೆ ಮತ್ತು ಬುಕ್ ಬೈಂಡಿಂಗ್
2. ಹಳೇ ಪೇಪರ್ ನಿಂದ ಕವರ್ ः ಬ್ಯಾಗ್ ತಯಾರಿಕೆ
3. ಸೀಮೆ ಸುಣ್ಣ ತಯಾರಿಕೆ
4. ಹಪ್ಪಳ ತಯಾರಿಕೆ
5. ಜಾಮ್, ಜೆಲ್ಲಿ ಮತ್ತು ಉಪ್ಪಿನಕಾಯಿ ತಯಾರಿಕೆ
6. ಜರಿ ಮತ್ತು ಎ ಂಬ್ರಾಯಡರಿ
7. ಉಣ್ಣೆಃಕಂಬಳಿ ನೇಯ್ಗೆ
8. ಸೀರೆಗೆ ಬಣ್ಣಾ ಹಾಕುವುದು (ಪ್ರಿಂಟಿಂಗ್ ಮತ್ತು ಡೈಯಿಂಗ್)
9. ಬೆಡ್ ಶೀಟ್ ಮತ್ತು ಟವೆಲ್ ತಯಾರಿಕೆ
10. ರೇಷ್ಮೆ ನೇಯ್ಗೆ
11. ಟೇಪು (ರಿಬ್ಬನ್ ತಯಾರಿಕೆ)
12. ಬೇಕರಿ
13. ಒಣ ಮೀನು ತಯಾರಿಕೆ
14. ಹೈನುಗಾರಿಕೆ
15. ಕೋಳಿ ಸಾಕಾಣಿಕೆ
16. ಬಾತು ಕೋಳಿ ಸಾಕಾಣಿಕೆ
17. ಚಪ್ಪಲಿ ತಯಾರಿಕೆ
18. ರೇಷ್ಮೆ ಹುಳು ಸಾಕಾಣಿಕೆ
19. ಹಿಟ್ಟು ರುಬ್ಬುವ ಯಂತ್ರ
20. ಹಣ್ಣು ಮತ್ತು ತರಕಾರಿ ಅಂಗಡಿ
21. ತರಕಾರಿ ಅಂಗಡಿ
22. ಕಿರಾಣಿ ಅಂಗಡಿ (ಮನೆ ಮನೆಗೆ ಸಾಕಾಣಿಕೆ)
23. ಕಿರಾಣಿ ಅಂಗಡಿ
24. ಬೆಣ್ಣೆ ಮತ್ತು ತುಪ್ಪ ಮಾರಾಟ ಅಂಗಡಿ
25. ಲೇಖನ ಸಾಮಗ್ರಿ ಅಂಗಡಿ
26. ಗಿಫ್ಟ್ ಆರ್ಟಿಕಲ್ಸ್ಃ ಫ್ಯಾನ್ಸಿ ಸ್ಟೋರ್ಸ್
27. ಬಳೆ ಮತ್ತು ಸೌಂದರ್ಯೋಪ ಯೋಗಿ ವಸ್ತುಗಳ ಅಂಗಡಿ
28. ಹಣ್ಣು ಮತ್ತು ಹೂವಿನ ಅಂಗಡಿ
29. ತಿಂಡಿ ಮತ್ತು ಊಟ ಸರಬರಾಜು
30. ಇಸ್ತ್ರೀ ಅಂಗಡಿ ಮತ್ತು ಡ್ರೈ ಕ್ಲೀನಿಂಗ್
31. ಕಟ್ ಪೀಸ್ ಅಂಗಡಿ (ಬಟ್ಟೆ ಅಂಗಡಿ)
32. ದಿನ ಪತ್ರಿಕೆ ः ವಾರ ಪತ್ರಿಕೆಃ ಮಾಸ ಪತ್ರಿಕೆ ಮಾರಾಟ
33. ಮೀನು ಅಂಗಡಿ
34. ಮಾಂಸದ ಅಂಗಡಿ
35. ಚಪ್ಪಲಿ ತಯಾರಿಸುವ ಕಚ್ಚಾ ಸಾಮಗ್ರಿಗಳ ಅಂಗಡಿ
36. ಚಪ್ಪಲಿ ಮಾರಾಟ ಅಂಗಡಿ
37. ಶಿಶು ವಿಹಾರ (Creeche)
38. ಹೊಲಿಗೆ ಅಂಗಡಿ
39. ಸಿದ್ಧ ಉಡುಪುಗಳ ಅಂಗಡಿ
40. ಸಿಗರೇಟು ಮತ್ತು ಪಾನ್ ಅಂಗಡಿ
41. ಚಾಪೆ ಹೆಣಿಗೆ ಅಂಗಡಿ
42. ಅಡಿಕೆ ಪಟ್ಟೆ ः ಎ ಲೆಯಿಂದ ದೊನ್ನೆ ಮತ್ತು ತಟ್ಟೆ ತಯಾರಿಕೆ
43. ಸೀಗೇ ಕಾಯಿ ಪೌಡರ್ ತಯಾರಿಕೆ
44. ಹಿಟ್ಟಿನ ಗಿರಣಿ
45. ಒಳ ಅಂಗಿಃಸಾಕ್ಸ್ ः ಸ್ವೆಟರ್ಸ್ಃ ಮಫ್ಲರ್ಸ
46. ಉಣ್ಣೆ ಉಡುಪುಗಳು
47. ಕಾಫಿ ಪುಡಿ ತಯಾರಿಕೆ
48. ಟುಟೋರಿಯಲ್
49. ಹೊಲಿಗೆ ತರಬೇತಿ ಸಂಸ್ಥೆ
50. ಬೆತ್ತ ಮತ್ತು ಬಿದಿರು ಅಂಗಡಿ
51. ಜಾಬ್ ಟೈಪಿಂಗ್ ಮತ್ತು ಜೆರಾಕ್ಸ್
52. ಎ ಸ್.ಟಿ.ಡಿ. ಬೂತ್
53. ಕರ ಕುಶಲ ವಸ್ತುಗಳ ಮಾರಾಟ ಅಂಗಡಿ
54. ಎ ಣ್ಣೆ ಅಂಗಡಿ (Edible Oil Shop)
55. ಚಹ ಅಂಗಡಿ
56. ಸೌದೆ ಅಂಗಡಿ
57. ನ್ಯಾಯ ಬೆಲೆ ಅಂಗಡಿ
58. ಬೆರಳಚ್ಚು ತರಬೇತಿ ಕೇಂದ್ರ
59. ರೇಷ್ಮೆ ದಾರ ತಯಾರಿಕೆ
60. ವಿಳ್ಳೆ ದೆಲೆ ಮಾರಾಟ
61. ಹಾಲಿನ ಕೇಂದ್ರ
62. ಬಾಟಲಿ ಮುಚ್ಚಳ ತಯಾರಿಕೆ
63. ಪ್ಲಾಸ್ಟಿಕ್ ವಸ್ತುಗಳ ತಯಾರಿಕೆ
64. ಇಂಕು ತಯಾರಿಕೆ
65. ಸಿದ್ಧ ಪಡಿಸಿದ ತಿಂಡಿ ತಿನಸು ಅಂಗಡಿ (Fast food resturant)
66. ಫಿನಾಯಿಲ್ ः ನ್ಯಾಪ್ತಲಿನ್ ಬಾಲ್ ತಯಾರಿಕೆ

67. ಸೋಪ್ ಆಯಿಲ್ ಃಸೋಪ್ ಪೌಡರ್ ಃ ಡಿಟರ್ಜೆಂಟ್ ತಯಾರಿಕೆ
68. ಕ್ಲೀನಿಂಗ್ ಪೌಡರ್
69. ವ್ಯಾಕ್ಸ್ ಪೇಪರ್ ತಯಾರಿಕೆ
70. ಹತ್ತಿ ದಾರ ತಯಾರಿಕೆ
71. ನೈಲಾನ್ ಗುಂಡಿ ತಯಾರಿಕೆ
72. ಶಾವಿಗೆ ತಯಾರಿಕೆ
73. ಕರುಗೇಟೆಡ್ ಬಾಕ್ಸ್ ತಯಾರಿಕೆ
74. ಬೆಂಕಿ ಪೊಟ್ಟಣ ತಯಾರಿಕೆ
75. ಜೂಟ್ ಕಾರ್ಪೆಟ್ ತಯಾರಿಕೆ
76. ಮಡಿಕೆ ಮತ್ತು ಕರಕುಶಲ ವಸ್ತುಗಳು
77. ನಾರಿನಚಾಪೆ ತಯಾರಿಕೆ
78. ಅಗರಬತ್ತಿ ತಯಾರಿಕೆ
79. ರಾಗಿ ಮತ್ತು ಹುರಿ ಹಿಟ್ಟು ತಯಾರಿಕೆ
80. ಶಕ್ತಿಯುತವಾದ ಆಹಾರ ವಸ್ತುಗಳ ತಯಾರಿಕೆ
81. ಕ್ವಿಲ್ಟ್ ಮತ್ತು ಹಾಸಿಗೆ ತಯಾರಿಕೆ
82. ಟ್ರಾವಲ್ ಏಜೆನ್ಸಿ
83. ತಿಂಡಿ ತಿನಸುಗಳ ಕೇಂದ್ರ
84. ಹಳೆ ಪೇಪರ್ ಹಾಗೂ ಹಳೆ ವಸ್ತುಗಳ ಮಾರಾಟ
85. ಸೆಕ್ಯುರಿಟಿ ಸರ್ವೀಸ್
86. ಎ ಳ ನೀರು ವ್ಯಾಪಾರ
87. ಬಾಳೆ ಎ ಲೆ ವ್ಯಾಪಾರ
88. ಆಡಿಯೋ ಮತ್ತು ವೀಡಿಯೋ ಕ್ಯಾಸೆಟ್ ವ್ಯಾಪಾರ
89. ರೇಡಿಯೋ ಮತ್ತು ಟಿ.ವಿ ರಿಪೇರಿ ಮತ್ತು ಸರ್ವೀಸಿಂಗ್
90. ಗೃಹೋಪಯೋಗಿ ಉಪಕರಣಗಳ ರಿಪೇರಿ ಮತ್ತು ಮಾರಾಟ ಅಂಗಡಿ
91. ಗ್ರಂಥಾಲಯ
92. ಸ್ವೀಟ್ಸ್ ಮತ್ತು ಕಾಂಡಿಮೆಂಟ್ಸ್ ಅಂಗಡಿ
93. ಐಸ್ ಕ್ರೀಮ್ ಅಂಗಡಿ
94. ಪಾನ್ ಅಂಗಡಿ
95. ಆಸ್ತಿ ಪಾಸ್ತಿ ಕಾರ್ಯಾಭಾರ (Real estate agency)
96. ದೇಹ ದಾರ್ಡ್ಯ ಕೇಂದ್ರ(Gymnastic centre)
97. ಕ್ಲಿನಿಕ್
98. ಫೋಟೊ ಸ್ಟುಡಿಯೋ
99. ರೋಗಿ ತಪಾಸಣಾ ಕೇ ಂದ್ರ (Diagnostic Lab)
100. ವಿಡಿಯೋ ಪಾರ್ಲರ್
101. ಬ್ಯುಟೀಶಿಯನ್

ಈ ಮೇಲ್ಕಂಡ ಚಟುವಟಿಕೆಗಳಲ್ಲದೆ ಇನ್ನಾವುದೇ ಲಾಭದಾಯಕರವಾದ ವ್ಯಾಪಾರಃ ಉದ್ಯಮ ಈ ಯೋಜನೆಯಡಿ ಸ್ಥಾಪಿಸಲು ಅವಕಾಶವಿರುತ್ತದೆ.

**ಆರ್.ಎಂ. ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 870

## ಸಹಕಾರ ಸಚಿವಾಲಯ

**ವಿಷಯ:** ಕೆ.ಸಿ.ಸಿ. ಬ್ಯಾಂಕ್ ನಿ., ಧಾರವಾಡ ಇದರ ಆಡಳಿತಗಾರರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಜಂಟಿ ನಿಬಂಧಕರು, (ಪತ್ತು) ಇವರ ಪತ್ರ ಸಂಖ್ಯೆ ಸಿಆರ್‌ಡಿ: ಸಿಎಬಿ-1: 17-2001-2002, ದಿನಾಂಕ: 29.3.2004.

**ಪ್ರಸ್ತಾವನೆ:**

ಕೆ.ಸಿ.ಸಿ. ಬ್ಯಾಂಕ್ ನಿ., ಧಾರವಾಡ, ಇದು ಆರ್ಥಿಕ ದುಸ್ಥಿತಿಯನ್ನು ತಲುಪಿದ ಕಾರಣ ಬ್ಯಾಂಕಿನ ಆಡಳಿತ ಮಂಡಳಿಯನ್ನು ರದ್ದುಪಡಿಸಿ ದಿನಾಂಕ: 10.12.2001 ರಂದು ಆಡಳಿತಗಾರರನ್ನು ನೇಮಿಸಲಾಗಿತ್ತು. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121ರಡಿ ಸರ್ಕಾರವು ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಆಡಳಿತಗಾರರ ಅವಧಿಯನ್ನು ಆಗಿಂದಾಗ್ಗೆ ಮುಂದುವರೆಸುತ್ತಾ ಬಂದಿರುತ್ತದೆ. ದಿನಾಂಕ: 10.6.2004 ರಂದು ಆಡಳಿತಗಾರರ ಅವಧಿಯು ಮುಕ್ತಾಯಗೊಂಡಿರುತ್ತದೆ. ಸಹಕಾರ ಸಂಘಗಳ ನಿಬಂಧಕರು ಬ್ಯಾಂಕಿನ ಆರ್ಥಿಕ ಮುಗ್ಗಟ್ಟಿನ ಹಿನ್ನಲೆಯಲ್ಲಿ ಆಡಳಿತಗಾರರ ಅವಧಿಯನ್ನು ದಿನಾಂಕ: 11.6.2004 ರಿಂದ 10.6.2005ರ ವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಆಡಳಿತಗಾರರನ್ನು ಬ್ಯಾಂಕಿಗೆ ನೇಮಕ ಮಾಡಿದ ನಂತರ ಕೆಳಕಂಡ ಕ್ರಮ ತೆಗೆದುಕೊಳ್ಳಲಾಗಿರುತ್ತದೆ.

1. ಸರ್ಕಾರದ ಪ್ರಯತ್ನದ ಫಲವಾಗಿ ರೂ.41.37 ಕೋಟಿ ಸಂಪನ್ಮೂಲ ಸಂಗ್ರಹಿಸಿದೆ.

2. 1999-2000ನೇ ಸಾಲಿನಲ್ಲಿ ಅಲ್ಪಾವಧಿ ಸಾಲವನ್ನು ಮಧ್ಯಮಾವಧಿ ಸಾಲವನ್ನಾಗಿ ಪರಿವರ್ತಿಸಲಾಗಿದ್ದು ಇದರ ಬಾಬ್ತು ನಬಾರ್ಡಿನಿಂದ ಪುನರ್‌ಧನ ರೂ.19.10 ಕೋಟಿಯನ್ನು ಮಂಜೂರು ಮಾಡಿದ್ದು ಅಪೆಕ್ಸ್ ಬ್ಯಾಂಕಿಗೆ ಈಗಾಗಲೇ ಈ ಹಣವನ್ನು ಬಿಡುಗಡೆ ಮಾಡಲಾಗಿರುತ್ತದೆ.

3. ಬಿ.ಆರ್.ಆಕ್ಟ್ ಕಲಂ 11(1)ರಿಂದ ಹೊರಬರಲು ದಿನಾಂಕ 1.4.2004 ರಿಂದ ದಿನಾಂಕ: 31.3.2007ರ ವರೆಗೆ ವಿನಾಯಿತಿ ಅರ್ಜಿಯನ್ನು ಕ್ರಿಯಾ ಅಭಿವೃದ್ಧಿ ಯೋಜನೆಯೊಂದಿಗೆ ನಬಾರ್ಡ್‌ಗೆ ಪ್ರತ್ಯೇಕವಾಗಿ ಶಿಫಾರಸ್ಸು ಮಾಡಲಾಗಿರುತ್ತದೆ.

4. ಅಪೆಕ್ಸ್ ಬ್ಯಾಂಕಿನಿಂದ ಅಲ್ಪಾವಧಿ ಪತ್ತಿನ ಮಿತಿ ರೂ.73.00 ಕೋಟಿಯನ್ನು ಮಂಜೂರು ಮಾಡಲಾಗಿದೆ.

5. ಲಾಭಗಳಿಸಿದ ಆಸ್ತಿಗಳನ್ನು (ಎನ್‌ಪಿಎ) ನಬಾರ್ಡ್ ಒ.ಟಿ.ಎಸ್. ಯೋಜನೆಯಡಿಯಲ್ಲಿ ಶೇಕಡ 14ರ ಬಡ್ಡಿ ದರದಲ್ಲಿ ವಸೂಲು ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.

6. ಸಾಲದ ಅಂತರ ಈ ಯೋಜನೆಯಡಿ ಸದರಿ ಬ್ಯಾಂಕಿಗೆ ದಿನಾಂಕ:31.3.2002ರ ವರೆಗೆ ರೂ.103.79 ಲಕ್ಷ ಧನ ಸಹಾಯ ನೀಡಲಾಗಿರುತ್ತದೆ.

7. ಬ್ಯಾಂಕಿನ ಪುನಃಶ್ಚೇತನಕ್ಕೆ ಸುಸ್ತಿ ಬೆಳೆ ಸಾಲ ಮತ್ತು ಮಾಧ್ಯಮಿಕ ಕೃಷಿ ಸಾಲಗಳ ಮೇಲಿನ ಪೂರ್ತಿ ಬಡ್ಡಿ ಮನ್ನಾ ಮಾಡಲು ಸರ್ಕಾರ ರೂ.25.00 ಕೋಟಿ ಮಂಜೂರು ಮಾಡಿರುತ್ತದೆ.

8. ಸರ್ಕಾರವು 2003-04ನೇ ಸಾಲಿನಲ್ಲಿ ಘೋಷಿಸಿದ ಪ್ಯಾಕೇಜ್ ಅಡಿ ಸುಮಾರು 117 ಕೋಟಿ ಸುಸ್ತಿ ಸಾಲಗಳು ವಸೂಲಾಗಿರುತ್ತದೆ. ಆದಾಗ್ಯೂ ಬ್ಯಾಂಕಿನ ಸಾಲ ವಸೂಲಾತಿಯಲ್ಲಿ ಸುಧಾರಣೆಯಾಗಿರುವುದಿಲ್ಲ. ಬ್ಯಾಂಕು ಲಿಕ್ವಿಡಿಟಿ ಸಮಸ್ಯೆಯನ್ನು ಎದುರಿಸುತ್ತಿದ್ದು ಅಪಾಯಕಾರಿ ಆರ್ಥಿಕ ಪರಿಸ್ಥಿತಿಯಲ್ಲಿ ಮುಂದುವರಿಯುತ್ತಿದೆ. ಬ್ಯಾಂಕು ದಿನಾಂಕ:31.3.2004ಕ್ಕೆ ರೂ.148.05 ಕೋಟಿ ರೂ.ಗಳ ಸಂಚಿತ ನಷ್ಟವನ್ನು ಹೊಂದಿರುತ್ತದೆ.

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆ.ಸಿ.ಸಿ. ಬ್ಯಾಂಕ್ ನಿ., ಧಾರವಾಡ ಇದರ ಆಡಳಿತಗಾರರ ಅವಧಿಯನ್ನು ವಿಸ್ತರಿಸಲು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯು 70 ಸಿಎಲ್‌ಎಂ 2004, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2004**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ 121ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 30ರ ಪ್ರಕರಣವನ್ನು ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕೆ.ಸಿ.ಸಿ. ಬ್ಯಾಂಕ್ ನಿ., ಧಾರವಾಡ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ. ಎಂದರೆ,

**30ರ ಪ್ರಕರಣದಲ್ಲಿ:**

1ನೇ ಉಪ ಪ್ರಕರಣದಲ್ಲಿರುವ "ಒಂದು ವರ್ಷ" ಎಂಬ ಪದಕ್ಕೆ ಬದಲಾಗಿ "ಮೂರು ವರ್ಷ" ಎಂಬುದಾಗಿ ಸೇರಿಸತಕ್ಕದ್ದು.

**ಸೂಚನೆ:** 30 (1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ:10.6.2005ರ ವರೆಗೆ ಜಾರಿಯಲ್ಲಿರತಕ್ಕದ್ದು ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 30(1)ಕ್ಕೆ ಪ್ರಕರಣದ ಉಪ ಬಂಧಗಳು ಪುನಃ ಜಾರಿಗೆ ಬರತಕ್ಕದ್ದು, ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 887 ವಿಶೇಷ ಕರ್ತವ್ಯಾಧಿಕಾರಿ,

ಸಹಕಾರ ಇಲಾಖೆ.

**ಕಾನೂನು ಸಚಿವಾಲಯ**

**ಸೇರ್ಪಡೆ ಆದೇಶ ಸಂಖ್ಯೆ:ಲಾ 110 ಎಲ್‌ಸಿಇ 2003, ಬೆಂಗಳೂರು, ದಿನಾಂಕ: 19ನೇ ಮೇ 2004**

ಸರ್ಕಾರಿ ಆದೇಶ ಸಂಖ್ಯೆ:ಲಾ 108 ಎಲ್‌ಸಿಇ 2003 ದಿನಾಂಕ 23-12-2003ರ ಆದೇಶ ಭಾಗದ ಪುಟ-3ರ ಕ್ರಮ ಸಂಖ್ಯೆ 4 ರ ಕಾಲಂ-4ರಲ್ಲಿ ಪ್ರತಿ ನ್ಯಾಯಾಲಯಕ್ಕೆ 7 ಹುದ್ದೆಗಳು ಎಂದು ನಮೂದಿಸಿದ್ದು, ಈ ಕೆಳಕಂಡಂತೆ ಹುದ್ದೆಗಳ ಪದನಾಮವನ್ನು ಸೇರ್ಪಡಿಸಿ ಓದಿಕೊಳ್ಳತಕ್ಕದ್ದು.

**ಕಡೂರು 2ನೇ ಅಪರ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ:-**

| | ಹುದ್ದೆಯ ಹೆಸರು | | ಹುದ್ದೆಗಳ ಸಂಖ್ಯೆ |
|---|---|---|---|
| 1) | ಸಿವಿಲ್ ಜಡ್ಜ್ (ಕಿರಿಯ ವಿಭಾಗ) | - | 1 |
| 2) | ಶೀಘ್ರಲಿಪಿಗಾರ | - | 1 |
| 3) | ಪ್ರಥಮ ದರ್ಜೆ ಸಹಾಯಕ | - | 1 |
| 4) | ಬೆರಳಚ್ಚುಗಾರ | - | 1 |
| 5) | ಅಟೆಂಡರ್ | - | 1 |
| 6) | ಪ್ಯೂನ್ಸ್ | - | 2 |
| | **ಒಟ್ಟು** | - | **7** |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014 ನ್ಯಾಯಪರಿಪಾಲನೆ-00-105 ವ್ಯವಹಾರ ಮತ್ತು ಸತ್ರ ನ್ಯಾಯಾಲಯಗಳು-0-01 ಸಿಬ್ಬಂದಿ ವೆಚ್ಚ-125 ಆಧುನೀಕರಣ ಯೋಜನೇತರ" ಇದರ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್. 889 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಕಾನೂನು ಇಲಾಖೆ (ಆಡಳಿತ-1)

**ಸೇರ್ಪಡೆ ಆದೇಶ ಸಂಖ್ಯೆ:ಲಾ 92 ಎಲ್‌ಸಿಇ 2003, ಬೆಂಗಳೂರು, ದಿನಾಂಕ: 19ನೇ ಮೇ 2004**

ಸರ್ಕಾರಿ ಆದೇಶ ಸಂಖ್ಯೆ:ಲಾ 108 ಎಲ್‌ಸಿಇ 2003 ದಿನಾಂಕ 23-12-2003ರ ಆದೇಶ ಭಾಗದ ಪುಟ-3 ಕ್ರಮ ಸಂಖ್ಯೆ 3 ರಲ್ಲಿನ ಗದಗ್ 4ನೇ ಅಪರ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ. (2ನೇ ನ್ಯಾಯಾಲಯ) ಎಂಬುದನ್ನು ಹಾಗೂ ಪ್ರತಿ ನ್ಯಾಯಾಲಯಕ್ಕೆ ಹುದ್ದೆಗಳ ಸಂಖ್ಯೆ:7 ಎಂದಿದ್ದು, ಈ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

"4ನೇ ಅಪರ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ. (2ನೇ ನ್ಯಾಯಾಲಯ) ಗದಗ್" ಎಂಬುದರ ಬದಲಾಗಿ "4ನೇ ಅಪರ ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ (2ನೇ ನ್ಯಾಯಾಲಯ) ಗದಗ್,

**ಗದಗ್ ನ್ಯಾಯಾಲಯ**

| ಹುದ್ದೆಯ ಹೆಸರು | | ಹುದ್ದೆಗಳ ಸಂಖ್ಯೆ |
|---|---|---|
| 1) ಸಿವಿಲ್ ಜಡ್ಜ್ (ಕಿರಿಯ ವಿಭಾಗ) | - | 1 |
| 2) ಶೀಘ್ರಲಿಪಿಗಾರ | - | 1 |
| 3) ಪ್ರಥಮ ದರ್ಜೆ ಸಹಾಯಕ | - | 1 |
| 4) ಬೆರಳಚ್ಚುಗಾರ | - | 1 |
| 5) ಅಟೆಂಡರ್ | - | 1 |
| 6) ಪ್ಯೂನ್ಸ್ | - | 2 |
| ಒಟ್ಟು | - | 7 |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014 ನ್ಯಾಯಪರಿಪಾಲನೆ-00-105 ವ್ಯವಹಾರ ಮತ್ತು ಸತ್ರ ನ್ಯಾಯಾಲಯಗಳು-0-01 ಸಿಬ್ಬಂದಿ ವೆಚ್ಚ-125 ಆಧುನೀಕರಣ ಯೋಜನೇತರ" ಇದರ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್. 890 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಕಾನೂನು ಇಲಾಖೆ (ಆಡಳಿತ-1)

**ಸೇರ್ಪಡೆ ಆದೇಶ ಸಂಖ್ಯೆ:ಲಾ 93 ಎಲ್‌ಸಿಇ 2003, ಬೆಂಗಳೂರು, ದಿನಾಂಕ: 19ನೇ ಮೇ 2004**

ಸರ್ಕಾರಿ ಆದೇಶ ಸಂಖ್ಯೆ:ಲಾ 108 ಎಲ್‌ಸಿಇ 2003, ದಿನಾಂಕ 23-12-2003ರ ಆದೇಶ ಭಾಗದ ಪುಟ-3 ಕ್ರಮ ಸಂಖ್ಯೆ 7 ರಲ್ಲಿ ಬಳ್ಳಾರಿ 2ನೇ ಅಪರ ಸಿವಿಲ್ ಜಡ್ಜ್ (ಹಿರಿಯ ವಿಭಾಗ)ಕ್ಕೆ ನಮೂದಿಸಿರುವ ಹುದ್ದೆಗಳ ಸಂಖ್ಯೆ : ಪ್ರತಿ ನ್ಯಾಯಾಲಯಕ್ಕೆ 7 ಎಂದಿದ್ದು, ಈ ಕೆಳಕಂಡಂತೆ ಸೇರ್ಪಡಿಸಿ ಓದಿಕೊಳ್ಳತಕ್ಕದ್ದು.

**2ನೇ ಅಪರ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯ ಬಳ್ಳಾರಿ**

| ಹುದ್ದೆಯ ಹೆಸರು | | ಹುದ್ದೆಗಳ ಸಂಖ್ಯೆ |
|---|---|---|
| 1) ಸಿವಿಲ್ ಜಡ್ಜ್ (ಹಿರಿಯ ವಿಭಾಗ) | - | 1 |
| 2) ಶೀಘ್ರಲಿಪಿಗಾರ | - | 1 |
| 3) ಪ್ರಥಮ ದರ್ಜೆ ಸಹಾಯಕ | - | 1 |
| 4) ಬೆರಳಚ್ಚುಗಾರ | - | 1 |
| 5) ಅಟೆಂಡರ್ | - | 1 |
| 6) ಪ್ಯೂನ್ಸ್ | - | 2 |
| ಒಟ್ಟು | - | 7 |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014 ನ್ಯಾಯಪರಿಪಾಲನೆ-00-105 ವ್ಯವಹಾರ ಮತ್ತು ಸತ್ರ ನ್ಯಾಯಾಲಯಗಳು-0-01 ಸಿಬ್ಬಂದಿ ವೆಚ್ಚ-125-ಆಧುನೀಕರಣ ಯೋಜನೇತರ" ಇದರ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್. 891 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಾನೂನು ಇಲಾಖೆ (ಆಡಳಿತ-1)

**ಸೇರ್ಪಡೆ ಆದೇಶ ಸಂಖ್ಯೆ:ಲಾ 103 ಎಲ್‌ಸಿಇ 2003, ಬೆಂಗಳೂರು, ದಿನಾಂಕ: 19ನೇ ಮೇ 2004**

ಸರ್ಕಾರಿ ಆದೇಶ ಸಂಖ್ಯೆ:ಲಾ 108 ಎಲ್‌ಸಿಇ 2003, ದಿನಾಂಕ 23-12-2003ರ ಆದೇಶ ಭಾಗದ ಪುಟ-3 ಕ್ರಮ ಸಂಖ್ಯೆ 8 ರಲ್ಲಿ ಕೋಲಾರ-2 ಮತ್ತು 3ನೇ ಅಪರ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಹುದ್ದೆಗಳ ಸಂಖ್ಯೆ : ಪ್ರತಿ ನ್ಯಾಯಾಲಯಕ್ಕೆ 7(14) ಎಂದಿದ್ದು, ಈ ಕೆಳಕಂಡಂತೆ ಸೇರ್ಪಡಿಸಿ ಓದಿಕೊಳ್ಳತಕ್ಕದ್ದು.

ಕೋಲಾರ-2 ಮತ್ತು 3ನೇ ಅಪರ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯ, ಹುದ್ದೆಯ ಹೆಸರು:

| ಹುದ್ದೆಯ ಹೆಸರು | | ಪ್ರತಿ ನ್ಯಾಯಾಲಯಕ್ಕೆ | ಒಟ್ಟು |
|---|---|---|---|
| 1) ಸಿವಿಲ್ ಜಡ್ಜ್ (ಹಿರಿಯ ವಿಭಾಗ) | - | 1 | 2 |
| 2) ಶೀಘ್ರಲಿಪಿಗಾರ | - | 1 | 2 |
| 3) ಪ್ರಥಮ ದರ್ಜೆ ಸಹಾಯಕ | - | 1 | 2 |
| 4) ಬೆರಳಚ್ಚುಗಾರ | - | 1 | 2 |
| 5) ಅಟೆಂಡರ್ಸ್ | - | 1 | 2 |
| 6) ಪ್ಯೂನ್ಸ್ | - | 2 | 4 |
| ಒಟ್ಟು | - | 7 | 14 |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014 ನ್ಯಾಯಪರಿಪಾಲನೆ-00-105 ವ್ಯವಹಾರ ಮತ್ತು ಸತ್ರ ನ್ಯಾಯಾಲಯಗಳು-0-01 ಸಿಬ್ಬಂದಿ ವೆಚ್ಚ-125-ಆಧುನೀಕರಣ ಯೋಜನೇತರ" ಇದರ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್. 892 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಾನೂನು ಇಲಾಖೆ (ಆಡಳಿತ-1)

## ಸೇರ್ಪಡೆ ಆದೇಶ

## ಸಂಖ್ಯೆ:ಲಾ 99 ಎಲ್‌ಸಿಇ 2003, ಬೆಂಗಳೂರು, ದಿನಾಂಕ: 19ನೇ ಮೇ 2004

ಸರ್ಕಾರಿ ಆದೇಶ ಸಂಖ್ಯೆ:ಲಾ 108 ಎಲ್‌ಸಿಇ 2003, ದಿನಾಂಕ 23-12-2003ರ ಆದೇಶ ಭಾಗದ ಪುಟ-3 ಕ್ರಮ ಸಂಖ್ಯೆ 6ಕ್ಕೆ ಹುದ್ದೆಗಳ ಸಂಖ್ಯೆ: ಪ್ರತಿ ನ್ಯಾಯಾಲಯಕ್ಕೆ 7 ಎಂದು ನಮೂದಿಸಿರುವುದನ್ನು, ಆ ಹುದ್ದೆಗಳ ಹೆಸರಿನೊಂದಿಗೆ ಈ ಕೆಳಕಂಡಂತೆ ಸೇರ್ಪಡಿಸಿ ಓದಿಕೊಳ್ಳತಕ್ಕದ್ದು.

**2ನೇ ಅಪರ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯ, ಹುಬ್ಬಳ್ಳಿ**

| ಹುದ್ದೆಯ ಹೆಸರು | | ಹುದ್ದೆಗಳ ಸಂಖ್ಯೆ |
|---|---|---|
| 1) ಸಿವಿಲ್ ಜಡ್ಜ್ (ಹಿರಿಯ ವಿಭಾಗ) | - | 1 |
| 2) ಶೀಘ್ರಲಿಪಿಗಾರ | - | 1 |
| 3) ಪ್ರಥಮ ದರ್ಜೆ ಸಹಾಯಕ | - | 1 |
| 4) ಬೆರಳಚ್ಚುಗಾರ | - | 1 |
| 5) ಅಟೆಂಡರ್ | - | 1 |
| 6) ಪ್ಯೂನ್ಸ್ | - | 2 |
| ಒಟ್ಟು | - | 7 |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014 ನ್ಯಾಯಪರಿಪಾಲನೆ-00-105 ವ್ಯವಹಾರ ಮತ್ತು ಸತ್ರ ನ್ಯಾಯಾಲಯಗಳು-0-01 ಸಿಬ್ಬಂದಿ ವೆಚ್ಚ-125-ಆಧುನೀಕರಣ ಯೋಜನೇತರ" ಇದರ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್. 893 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಾನೂನು ಇಲಾಖೆ (ಆಡಳಿತ-1)

## ಸೇರ್ಪಡೆ ಆದೇಶ ಸಂಖ್ಯೆ:ಲಾ 100 ಎಲ್‌ಸಿಇ 2003, ಬೆಂಗಳೂರು, ದಿನಾಂಕ: 19ನೇ ಮೇ 2004

ಸರ್ಕಾರಿ ಆದೇಶ ಸಂಖ್ಯೆ:ಲಾ 108 ಎಲ್‌ಸಿಇ 2003, ದಿನಾಂಕ 23-12-2003ರ ಆದೇಶ ಭಾಗದ ಪುಟ-3ರ ಕ್ರಮ ಸಂಖ್ಯೆ 2 ರ ಕಾಲಂ 4ರಲ್ಲಿ ಪ್ರತಿ ನ್ಯಾಯಾಲಯಕ್ಕೆ 13 ಹುದ್ದೆಗಳಂತೆ ಒಟ್ಟು 104ನ್ನು ಸೃಜಿಸಿದ್ದು, ಅವುಗಳ ಪದನಾಮವನ್ನು ಈ ಕೆಳಕಂಡಂತೆ ಸೇರ್ಪಡಿಸಿ ಓದಿಕೊಳ್ಳತಕ್ಕದ್ದು.

ಬೆಂಗಳೂರಿನ 8-ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳು:-

| ಹುದ್ದೆಯ ಹೆಸರು | | ಪ್ರತಿ ನ್ಯಾಯಾಲಯಕ್ಕೆ | ಒಟ್ಟು |
|---|---|---|---|
| 1) ಅಡಿಷನಲ್ ಸಿಟಿ ಸಿವಿಲ್ ಮತ್ತು ಸೆಷನ್ಸ್ ಜಡ್ಜ್, ಬೆಂಗಳೂರು | - | 1 | 8 |
| 2) ತೀರ್ಪು ಬರಹಗಾರರು | - | 2 | 16 |
| 3) ಶಿರಸ್ತೇದಾರರು | - | 2 | 16 |
| 4) ಪ್ರಥಮ ದರ್ಜೆ ಸಹಾಯಕರು | - | 2 | 16 |

| ಹುದ್ದೆಯ ಹೆಸರು | | ಪ್ರತಿ ನ್ಯಾಯಾಲಯಕ್ಕೆ | ಒಟ್ಟು |
|---|---|---|---|
| 5) ದ್ವಿತೀಯ ದರ್ಜೆ ಸಹಾಯಕರು | - | 2 | 16 |
| 6) ಬೆರಳಚ್ಚುಗಾರರು | - | 1 | 8 |
| 7) ಅಟೆಂಡರ್ಸ್ | - | 1 | 8 |
| 8) ಪ್ಯೂನ್ಸ್ | - | 2 | 16 |
| ಒಟ್ಟು | - | 13 | 104 |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014 ನ್ಯಾಯಪರಿಪಾಲನೆ-00-105 ವ್ಯವಹಾರ ಮತ್ತು ಸತ್ರ ನ್ಯಾಯಾಲಯಗಳು-0-01 ಸಿಬ್ಬಂದಿ ವೆಚ್ಚ-125-ಆಧುನೀಕರಣ ಯೋಜನೇತರ" ಇದರ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್. 894

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಾನೂನು ಇಲಾಖೆ (ಆಡಳಿತ-1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಫಾಸ್ಟ್ ಟ್ರ್ಯಾಕ್ಸ್ ನ್ಯಾಯಾಲಯಗಳಿಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಹೊಂದಿದ 5 ನಿವೃತ್ತ ಜಿಲ್ಲಾ ನ್ಯಾಯಾಧೀಶರ ಗುತ್ತಿಗೆ ಅವಧಿಯನ್ನು ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 48 ಸೇಉನ್ಯಾ 2001, ದಿ:29-8-2002.
2. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 66 ಸೇಉನ್ಯಾ 2003, ದಿ:3-10-2003.
3. ರಿಜಿಸ್ಟ್ರಾರ್ ಜನರಲ್ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆರ್‌ಒಸಿ: ಜಿಒಬಿ: (1) : 585 : 2000, ದಿನಾಂಕ: 23-7-2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ:29-8-2002ರಲ್ಲಿ ಕೊಡಗು ಮತ್ತು ಗದಗ್‌ನಲ್ಲಿ ಫಾಸ್ಟ್ ಟ್ರ್ಯಾಕ್ ಕೋರ್ಟ್‌ಗಳಿಗೆ ಗುತ್ತಿಗೆ ಆಧಾರದ ಮೇಲೆ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15 ರಡಿಯಲ್ಲಿ ನಿವೃತ್ತ ನ್ಯಾಯಾಧೀಶರುಗಳಾದ ಶ್ರೀ ಡಿ.ಎ. ಲಾಥ್, (ಕೊಡಗು) ಹಾಗೂ ಶ್ರೀ ಹೆಚ್.ಎಸ್. ಪಾಟೀಲ್, (ಗದಗ್) ಸದರಿ ಹುದ್ದೆಯಲ್ಲಿ ಪ್ರಭಾರ ವಹಿಸುವ ದಿನದಿಂದ 2 ವರ್ಷಗಳ ಅವಧಿಗೆ ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳ ಪ್ರಿಸೈಡಿಂಗ್ ಆಫೀಸರನ್ನಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 3-10-2003 ರಲ್ಲಿ ರಾಜ್ಯದಲ್ಲಿ ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳಲ್ಲಿ ಪ್ರಿಸೈಡಿಂಗ್ ಅಧಿಕಾರಿಗಳಾಗಿ ಕೆಲಸ ಮಾಡುತ್ತಿದ್ದ ಶ್ರೀ ಎನ್. ಪ್ರಹ್ಲಾದಾಚಾರ್ಯ, ಬೆಂಗಳೂರು ಗ್ರಾಮಾಂತರ, ಶ್ರೀ ವಿ.ಎಸ್. ಅರಟ್ಟಿ, ಧಾರವಾಡ, ಶ್ರೀ ರಾಮರಾವ್ ಕುಲಕರ್ಣಿ, ಕೋಲಾರ, ಈ ನ್ಯಾಯಾಧೀಶರುಗಳ ಸೇವೆಯನ್ನು ದಿನಾಂಕ: 11.8.2003 ರಿಂದ 10.8.2004 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 15 ರಡಿ ರೂ. 9,500 ಗಳ ಸಂಚಿತ ವೇತನದಲ್ಲಿ ಮುಂದುವರೆಸಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ಪತ್ರ ದಿನಾಂಕ: 23.7.2004 ರಲ್ಲಿ ರಿಜಿಸ್ಟ್ರಾರ್ ಜನರಲ್ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರು ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳಿಗೆ ಪ್ರಿಸೈಡಿಂಗ್ ಅಧಿಕಾರಿಗಳಾಗಿ ನೇಮಿಸಲಾಗಿದ್ದ ಈ ಕೆಳಕಂಡ 5 ಮಂದಿ ನಿವೃತ್ತ ನ್ಯಾಯಾಧೀಶರುಗಳ ಸೇವೆಯನ್ನು ಅವರ ಹೆಸರಿನ ಮುಂದೆ ಸೂಚಿಸಿದ ದಿನಾಂಕದಿಂದ ಮುಕ್ತಾಯಗೊಳಿಸುವಂತೆ ಕೋರಿರುತ್ತಾರೆ.

1) ಶ್ರೀ ಎನ್. ಪ್ರಹ್ಲಾದಾಚಾರ್ಯ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು - 10-8-2004
2) ಶ್ರೀ ವಿ.ಎಸ್. ಅರಟ್ಟಿ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಧಾರವಾಡ - 10-8-2004
3) ಶ್ರೀ ರಾಮ್‌ರಾವ್ ಕುಲಕರ್ಣಿ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಕೋಲಾರ. - 10-8-2004
4) ಶ್ರೀ ಡಿ.ಎ. ಲಾಥ್, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ, ಕೊಡಗು, ಮಡಿಕೇರಿ. - 10-9-2004
5) ಶ್ರೀ ಎಸ್.ಹೆಚ್. ಪಾಟೀಲ್, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ, ಗದಗ್. - 11-9-2004

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 68, ಸೇಉನ್ಯಾ 2004, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಈ ಕೆಳಕಂಡ ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿರುವ ನಿವೃತ್ತ ನ್ಯಾಯಾಧೀಶರುಗಳು, ಇವರ ಸೇವೆಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ದಿನಾಂಕದಿಂದ ಮುಕ್ತಾಯಗೊಳಿಸಿ ಆದೇಶ ಹೊರಡಿಸಿದೆ.

1) ಶ್ರೀ ಎನ್. ಪ್ರಹ್ಲಾದಾಚಾರ್ಯ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು - 10-8-2004

2) ಶ್ರೀ ವಿ.ಎಸ್. ಅರಟ್ಟಿ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಧಾರವಾಡ - 10-8-2004

3) ಶ್ರೀ ರಾಮ್‌ರಾವ್ ಕುಲಕರ್ಣಿ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಕೋಲಾರ. - 10-8-2004

4) ಶ್ರೀ ಡಿ.ಎ. ಲಾಥ್, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ, ಕೊಡಗು, ಮಡಿಕೇರಿ. - 10-9-2004

5) ಶ್ರೀ ಎಸ್.ಹೆಚ್. ಪಾಟೀಲ್, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ, ಗದಗ್. - 11-9-2004

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 895 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3)

## ಶಿಕ್ಷಣ ಸಚಿವಾಲಯ

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆಯ ವತಿಯಿಂದ ಕೈಗೊಂಡ ಅಕ್ಷರ ದಾಸೋಹ ಕಾರ್ಯಕ್ರಮದ ಮೌಲ್ಯಮಾಪನ ನಡೆಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಅವರ ಪತ್ರ ಸಂಖ್ಯೆ:ಯೋ(1)ಮೌಲ್ಯಮಾಪನ 2:2004-05 ದಿ:7-6-2004.

**ಪ್ರಸ್ತಾವನೆ:**

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ದಿ:7.6.2004ರ ತಮ್ಮ ಪತ್ರದಲ್ಲಿ ರಾಜ್ಯ ಸರ್ಕಾರದ ವತಿಯಿಂದ 2003-04ನೇ ಸಾಲಿನಲ್ಲಿ ರೂ.202 ಕೋಟಿಗಳ ವೆಚ್ಚದಲ್ಲಿ ರಾಜ್ಯಾದ್ಯಂತ ಅಕ್ಷರ ದಾಸೋಹ ಯೋಜನೆಯನ್ನು ಅನುಷ್ಠಾನಗೊಳಿಸಿದ್ದು, ಶಾಸನಬದ್ಧ ನಿಬಂಧನೆಯಂತೆ ರೂ.100 ಲಕ್ಷಕ್ಕೂ ಮೀರಿದ ಯೋಜನೆಗಳನ್ನು ಮೌಲ್ಯಮಾಪನ ಕಾರ್ಯ ಕೈಗೊಳ್ಳಬೇಕಿರುವ ಕಾರಣ ಅಕ್ಷರ ದಾಸೋಹ ಕಾರ್ಯಕ್ರಮದ ಅನುಷ್ಠಾನ ಮತ್ತು ಪರಿಣಾಮದ ಬಗ್ಗೆ ಮೌಲ್ಯಮಾಪನ ನಡೆಸಲು ಆದೇಶ ಹೊರಡಿಸುವಂತೆ ಕೋರಿದ್ದಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಅಕ್ಷರ ದಾಸೋಹದ ಅನುಷ್ಠಾನ ಮತ್ತು ಪರಿಣಾಮದ ಕುರಿತು ಮೌಲ್ಯಮಾಪನ ಕೈಗೊಳ್ಳಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 63 ಎಂಎಂಎಸ್ 2004, ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2004**

**(ಇಡಿ 39 ಸ್ಕೀಮರ (ಯೂನಿಕ್ಸ್) 2004, ದಿನಾಂಕ: 9ನೇ ಆಗಸ್ಟ್ 2004)**

ಕರ್ನಾಟಕ ರಾಜ್ಯದಲ್ಲಿ ಜಾರಿಯಲ್ಲಿರುವ ಅಕ್ಷರ ದಾಸೋಹ ಕಾರ್ಯಕ್ರಮದ ಅನುಷ್ಠಾನ ಮತ್ತು ಪರಿಣಾಮ ಕುರಿತು ಮೌಲ್ಯಮಾಪನವನ್ನು ಕೂಡಲೇ ಕೈಗೊಳ್ಳಬೇಕೆಂದು ಈ ಮೂಲಕ ಆದೇಶಿಸುತ್ತದೆ. ಈ ಮೌಲ್ಯಮಾಪನವನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಕೈಗೊಳ್ಳತಕ್ಕದ್ದು. ಸರ್ಕಾರಿ ಆದೇಶ ಸಂಖ್ಯೆ:ಐಎಫ್ಎಸ್ 42 ಇವಿಎಸ್ (1)99, ದಿ:17.11.2000ದಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಿ ಹಾಗೂ ಮಾರ್ಗದರ್ಶಿ ಸೂತ್ರಗಳನ್ನು ಪಾಲಿಸಿ ಮೌಲ್ಯಮಾಪನವನ್ನು ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 896 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

## ENERGY SECRETARIAT

**Sub:** Release of electricity arrears of Rural Local Bodies to Karnataka Power Transmission Corporation Limited.

**Read:** Note No : EN 69 PSR 2003, dated : 30.7.2004, of the Principal Secretary, Energy Department addressed to Additional Chief Secretary and Principal Secretary, Finance Department.

**Preamble:-**

Karnataka Power Transmission Corporation Limited and ESCOMS have been facing the problem for a long time now of Grama Panchayats not paying the power charges for the electricity supplied to their water supply installations and street lights. The power utilities have not been able to recover these dues because Government is not allowing them to disconnect power supply to defaulting Panchayats.

2. Accordingly, in the U.O. Note dated : 30.7.2004 referred to above Finance Department was requested to release an amount Rs. 459 Crore in one instalment. 50% to Karnataka Power Transmission Corporation Limited & 50% to Karnataka Power Corporation Limited.

3. Hence, the following Order.

**Government Order No : DE 69 PSR 2003, Bangalore, Dated 11th August 2004**

4. Government are pleased to release a sum of Rs. 200 Crores (Rupees two hundred crores only) to Karnataka Power Transmission Corporation Limited towards payment of arrears of Rural Local Bodies electricity dues out of the budgeted amount under the Head of Account 2801-80101-1-04-106 subsidy (Non-plan) to Karnataka Power Transmission Corporation Limited.

5. No additionality will be provided to the R.E. subsidy payable to the Karnataka Power Transmission Corporation Limited/ESCOMS, on this count.

6. During the year 2003-04 a sum of Rs. 102.56 crores have been released towards the arrears of the Rural Local Body electricity dues. The progressive release thus amounts to Rs. 302.56 crore on account of arreas RLB dues.

7. The Karnataka Power Transmission Corporation Limited is directed to reconcile the arrears of all Rural Local Bodies on Books of ESCOMS and to take reduced arrears proportinately and to clear the accounts. The arrears of RLB dues on the books of Karnataka Power Transmission Corporation Limited / ESCOMS are adjusted proporatinately to the extent of fund released. Further release will only be made after such adjustment is carried out.

8. The Karnataka Power Transmission Corporation Limited shall obtain the counter signature of Principal Secretary to Government, Energy Department on payees receipt bill and draw the amount.

9. This order issues with the consurrence of Finance Department vide U.O.Note No. FD 1460 EXP-I 2004, dated : 9.8.2004.

By Order and in the name of the Governor of Karnataka,

**K.L. JAYARAM**

P.R. 897

Under Secretary to Government,

Energy Department.

**FOREST, ECOLOGY AND ENVIRONMENT SECRETARIAT**

**CIRCULAR No. FEE 133 Secy (E&E) 2004, Bangalore, Dated: 13th August 2004**

I have taken charge as Secretary to Government (Ecology and Environment), Forest, Ecology and Environment Department, with effect from 12.8.2004 forenoon vide Notification No. DPAR 392 SAS 2004 dated 11.8.2004. Correspondence may please be sent to the following address.

I.M. Vittala Murthy,
Secretary to Government (Ecology & Environment),
Forest, Ecology and Environment Department,
Room No.709, 7th Floor,
Multistoried Building,
Bangalore - 560 001.
Phone:- Off: 22254 377 / 22092 445
Fax: 22254 377
Res: 26492848

**I.M. VITTALA MURTHY**

P.R. 898

Secretary (Ecology & Environment),

Forest, Ecology & Environment Department.

**URBAN DEVELOPMENT SECRETARIAT**

**CORRIGENDUM No. UDD 14 IST 2000, Bangalore, Dated: 26th July 2004**

The words appearing in the order portion of G.O.No. UDD 14 IST 2000, dt: 17.6.2004 "and to adjust into the PD account of respective Deputy Commissioners of the Districts" shall be substituted and read as "and release the funds to these towns as per IDSMT revised guidelines".

By Order and in the name of the Governor of Karnataka,

**T. RANGANATH**

P.R. 899

Under Secretary to Government,

Urban Development Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎಂ.ಇ. ಶಿವಲಿಂಗಮೂರ್ತಿ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಹಾಲಿ ರಿಜಿಸ್ಟ್ರಾರ್, ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ (ಪರಿಗಣಿತ ವಿಶ್ವವಿದ್ಯಾಲಯ) ಇವರ ನಿಯೋಜನಾ ಅವಧಿಯಲ್ಲಿ ಪಾವತಿಸಿರುವ ರಜಾವೇತನ ಹಿಂಬರಿಸುವ ಬಗ್ಗೆ.

**ಓದಲಾಗಿದೆ:** Assistant Administrative Officer (claims) NIMHANS, Bangalore, ಇವರ ಪತ್ರ ಸಂಖ್ಯೆ: NIMH/CLMS/LSR/2004-05, ದಿನಾಂಕ:27-7-2004.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:27.7.2004ರ ಪತ್ರದಲ್ಲಿ ಶ್ರೀ ಎಂ.ಇ. ಶಿವಲಿಂಗಮೂರ್ತಿ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಾಲಿ ರಿಜಿಸ್ಟ್ರಾರ್, ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ (ಪರಿಗಣಿತ ವಿಶ್ವವಿದ್ಯಾಲಯ) ಇವರ ನಿಯೋಜನಾ ಅವಧಿಯಲ್ಲಿ ಏಪ್ರಿಲ್ 2003 ರಿಂದ ಮಾರ್ಚ್ 2004ರವರೆಗಿನ ರಜಾ ವೇತನ ರೂ. 6587/- (ಆರು ಸಾವಿರದ ಐದುನೂರ ಎಂಬತ್ತೇಳು ರೂಪಾಯಿಗಳು ಮಾತ್ರ) ಹಿಂಬರಿಸಲು ಪ್ರಸ್ತಾಪಿಸಿರುತ್ತಾರೆ.

ನಿಯೋಜನೆ ಮೇಲಿರುವ ನೌಕರರು/ಅಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ 436 ರನ್ವಯ ನಿಯೋಜನಾ ಅವಧಿಯ ರಜಾ ವೇತನ ಹಿಂಬರಿಸಲು ಅವಕಾಶವಿದೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 298 ಆಸೇಇ 2004, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಂ.ಇ. ಶಿವಲಿಂಗಮೂರ್ತಿ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಾಲಿ ರಿಜಿಸ್ಟ್ರಾರ್, ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ (ಪರಿಗಣಿತ ವಿಶ್ವವಿದ್ಯಾಲಯ) ಬೆಂಗಳೂರು ಇವರ ನಿಯೋಜನಾ ಅವಧಿಯಲ್ಲಿ ಪಾವತಿಸಿರುವ ಏಪ್ರಿಲ್ 2003 ರಿಂದ ಮಾರ್ಚ್ 2004 ರವರೆಗಿನ ರಜಾವೇತನ ರೂ. 6587/- (ಆರು ಸಾವಿರದ ಐದು ನೂರ ಎಂಬತ್ತೇಳು ರೂಪಾಯಿಗಳು ಮಾತ್ರ) ಸಂಸ್ಥೆಗೆ ಹಿಂಬರಿಸಲು ಕರ್ನಾಟಕ ನಾಗರೀಕ ಸೇವಾ ನಿಯಮ 436 ರನ್ವಯ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 901

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ENERGY SECRETARIAT**

**Sub:** Payment to Consultants-Authorization for payment towards Consultancy fees payable - reg.

**Read:**
(1) G.O. No. DE 17 PSR 1999 (Part III) Vol. II dated 31.3.2001.
(2) G.O. No. DE 6 PSR 2003 dated 27.6.2003.
(3) G.O. No. DE 27 PSR 2003 (Vol.3) dated 5.3.2004.
(4) AG (A&E) Letter No.TM/JII/Misc-50/2004-05/142 dt. 9.8.2004.

**Preamble:-**

Government of Karnataka vide Government Order read at (1) appointed Consultants for obtaining Consultancy services for Power Sector Reforms Programme. In the Government Order read at (2) & (3), the contract entered into with the consultants has been extended from time to time. The authorization for drawal of amount from the State Huzur Treasury issued by the Accountant General in Karnataka under the Head of account 2801-80-101-1-80 (Plan) was valid till 31.3.2004. In the State Budget for the year 2004-05 a sum of Rs.16.10 Crores has been provided as Technical Assistance for Power Sector Reforms under the Budget Head 2801-80-101-1-80 (Plan). Payments to the Consultants have to be made as per the above Budget allocation during 2004-05. The Accountant General (A&E), Karnataka, Bangalore vide letter read at (4), above insisted for a specific Government Order indicating sanctioned amount, for authorizing the Energy Department to draw and disburse payments to the consultants during the year 2004-05. Hence this order.

**Government Order No. DE 76 PSR 2003 (Vol.3) Dated: 18th August 2004**

In the circumstances explained in the preamble, Government are pleased to accord approval for the following.

1) To arrange payment of fees during 2004-05 towards Consultancy services obtained in the period of Contract, through M/s CMS Cameron Mekenna U.K. Consortium - Financial Distribution Privatization (FDP) Consultants and M/s Pricewaterhouse Coopers Development Associates Ltd., U.K. - Institutional Strengthening and Power Market Development (ISP) Consultants.

2) The Special Secretary to Government (Power Reforms), Energy Department is authorized to sign all documents, draw and disburse payments to the Consultants as per the terms and conditions of the contract agreement and as amended from time to time based on the Payee's receipt submitted by the Consultants.
3) The Expenditure on this account is to be met out of the Budget provision of Rs.16.10 Crores made for the year 2004-05 under the Head of Account 2801-80-101-1-80 (Plan) - TA Loan for Power Sector Reforms.

By Order and in the name of the Governor of Karnataka,

**K.L. JAYARAM**

Under Secretary to Government,

Energy Department.

P.R. 902

**Sub:** Establishment of New Electricity Supply Company with head quarters at Mysore.

**Read:** G.O. No. DE 69 PSR 2001 dated 15.2.2002.

**Preamble:-**

As part of the Reforms process in Karnataka Power Sector, the erstwhile Karnataka Electricity Board (KEB) was corporatised and two successor entities viz Karnataka Power Transmission Corporation Limited (KPTCL) and Visveswaraiah Vidyuth Nigama Limited (VVNL) were formed and incorporated on 28.7.1999.

Continuing the process of reforms, KPTCL was unbundled to form four Electricity Supply Companies viz Bangalore Electricity Supply Company (BESCOM), Mangalore Electricity Supply Company (MESCOM), Hubli Electricity Supply Company (HESCOM) and Gulbarga Electricity Supply Company (GESCOM) on regional basis vide Government Order read above.

The existing jurisdiction of MESCOM covers 9 districts, which is very vast when compared to other Escoms. It is difficult for the Management of MESCOM to exercise effective supervision and control over this large area and it is also difficult for consumers of Mysore, Chamarajanagar, Mandya and Hassan Districts to go all the way to Head office at Mangalore. The requirements of consumers and the nature of distribution problems also vary within the MESCOM area. Further, Mysore is a major tourist, educational and cultural center.

All the above mentioned facts necessitate establishment of a new Electricity distribution Company covering Mysore, Mandya, Hassan and Chamarajnagar Districts with Mysore as Head Quarters. Hence this Order.

**Government Order No. EN 98 PSR 2004, Bangalore, Dated: 19th August 2004**

In the circumstances explained in the preamble, Government are pleased to accord approval for the following:

1. To establish new electricity Distribution Company with headquarters at Mysore city with its jurisdiction comprising the districts of Mysore, Chamrajnagar, Mandya and Hassan.
2. To incorporate the new distribution company as a public limited company under the Companies Act under the name of "Chamundeshwari Electricity Supply Company Limited". Two other names in the order of preference (i) "Mysore Electricity Supply Company Limited" and (ii) "Chamundi Electricity Supply Company Limited" may be indicated while applying to the Registrar of Companies for the name availability.
3. The new Company to have an initial authorized share capital of Rs. 1.00 Crore.
4. To have seven subscribers to the Memorandum of Association and Articles of Association with a paid up capital of Rs. 5.00 lakhs. The names of the first subscribes are;
   (i) Principal Secretary, Energy Department (by name) 49994 shares of Rs. 10 each.
   (ii) Additional Chief Secretary and Principal Secretary, Finance Department (by name) One share
   (iii) Managing Director, KPTCL, (by name) one share
   (iv) Special Secretary (Power Reforms), Energy Department (by name) one share
   (v) Director (Transmission), KPTCL, (by name) one share
   (vi) Director (Finance), KPTCL (by name) one share.
   (vii) Director (Personnel), KPTCL (by name) one share.
5. The names of the first directors are
   (i) Principal Secretary, Energy Department (by name)
   (ii) Managing Director, KPTCL (by name)

(iii) Director (Finance), KPTCL, (by name)
(iv) Director (Transmission), KPTCL (by name)

6. The MoA and AoA of the new Company may be similar to the MoA and AoA of existing MESCOM.
7. Sri R. Sridhar, Company Secretary, KPTCL, is authorized to take all steps for the incorporation of the proposed new company. The initial expenditure in this regard including subscription to share capital may be borne by the KPTCL, which is to be reimbursed by the new company.
8. MESCOM is directed to authorize the new Company to carry out its functions subject to the conditions prescribed under the Karnataka Electricity Regulatory Commission (conditions of license for Escoms) Regulations, 2004 by entering into a suitable MoU or agreement with the new company with prior information to the KERC.
9. The new Company will initially function on behalf of MESCOM. Immediately it will not own the assets, which will continue to belonging to MESCOM. Government will take necessary action to propose amendment of the Statute so as to enable transfer of assets from MESCOM to the New Company.

This Order issues with the concurrence of the Finance Department vide their note no. FD/1315/Exp-1/2004 dated 23.7.2004.

By Order and in the name of the Governor of Karnataka,
**K.L. JAYARAM**
Under Secretary to Government,
Energy Department.

P.R. 903

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ:** ಶ್ರೀ ಮಹಮ್ಮದ್ ಜಕಾವುಲ್ಲಾ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ) ರಾಯಚೂರು ಹಾಗೂ ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕ ರವರ ವಿರುದ್ದದ ಶಿಸ್ತು ಕ್ರಮಗಳ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಕಾರಣ ಕೇಳುವ ಪತ್ರ ಸಂಖ್ಯೆ:ಕೃತೋಇ 45 ತೋಸೇಪ 2004, ದಿನಾಂಕ:21-2-2004.
2. ಶ್ರೀ ಮಹಮದ್ ಜಕಾವುಲ್ಲಾ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ) ರವರ ಲಿಖಿತ ಹೇಳಿಕೆ ದಿನಾಂಕ:27-2-2004.
3. ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕ ರವರ ಸ್ವೀಕೃತಿ ದಿನಾಂಕ:9-3-2004

**ಪ್ರಸ್ತಾವನೆ:**

ಶ್ರೀ ಮಹಮ್ಮದ್ ಜಕಾವುಲ್ಲಾ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ), ರಾಯಚೂರು ಇವರು ಈ ಹಿಂದೆ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ) ಮಾನ್ವಿಯಾಗಿ ಹಾಗೂ ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕರವರು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ) ಸಿಂಧನೂರುರವರ ಅಧೀನ ಪ್ರಭಾರೆ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ), ಮಾನ್ವಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಗೆ ಸಂಬಂಧಿಸಿದಂತೆ, 1997-98ನೇ ಸಾಲಿನಿಂದ 2002-03ರವರೆಗಿನ ಸಾಲಿನ ಆಡಿಟ್ ತಪಾಸಣೆಯನ್ನು ನಡೆಸಿ, ಆಡಿಟ್ ವರದಿಯನ್ನು ಬಿಡುಗಡೆ ಮಾಡಲಾಗಿದ್ದರೂ, ಸದರಿ ಆಡಿಟ್ ವರದಿಗೆ ಇಲ್ಲಿ ಯಾವುದೇ ಅನುಸರಣಾ ವರದಿಯನ್ನು ಸಲ್ಲಿಸಿರುವುದಿಲ್ಲ. ಅಲ್ಲದೇ ಲೆಕ್ಕ ತಪಾಸಣಾ ವರದಿಯನ್ವಯ ಇವರುಗಳ ವಿರುದ್ಧ ಹಲವು ಕಂಡಿಕೆಗಳ ಆಕ್ಷೇಪಣೆ ಹಾಗೂ ವಸೂಲಾತಿಗೆ ಸೂಚಿಸಲಾಗಿದ್ದರ ಹಿನ್ನೆಲೆಯಲ್ಲಿ ಅವರೀರ್ವರ ವಿರುದ್ಧ ಆರೋಪ ಪಟ್ಟಿಯನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ:21-2-2004ರ ಕಾರಣ ಕೇಳುವ ಪತ್ರದೊಂದಿಗೆ ಜಾರಿ ಮಾಡಲಾಗಿತ್ತು. ಈ ಆರೋಪಗಳಿಗೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ) ರಾಯಚೂರು ಇವರು ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದಾರೆ.

ಕ್ರಮಾಂಕ (2)ರಲ್ಲಿ ಓದಲಾಗಿರುವ ದಿನಾಂಕ:27.2.2004ರ ಪತ್ರದಲ್ಲಿ ಶ್ರೀ ಮಹಮದ್ ಜಕಾವುಲ್ಲಾ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ನಿವೃತ್ತ)ರವರು ತಮ್ಮ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ, ಲಿಖಿತ ಹೇಳಿಕೆಯನ್ನು ಸಲ್ಲಿಸಿ, ಆರೋಪಗಳನ್ನು ತಳ್ಳಿಹಾಕಿರುತ್ತಾರೆ. ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕ ಇವರು ಕ್ರಮಾಂಕ (1)ರಲ್ಲಿ ಜಾರಿ ಮಾಡಿದ ಕಾರಣ ಕೇಳುವ ಪತ್ರವನ್ನು ಆಪಾದನಾ ಪಟ್ಟಿಯೊಂದಿಗೆ ದಿನಾಂಕ:9.3.2004 ರಂದು ಸ್ವೀಕರಿಸಿ, ಯಾವುದೇ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಶ್ರೀ ಮಹಮ್ಮದ್ ಜಕಾವುಲ್ಲಾ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ನಿ) ರವರು ತಮ್ಮ ಮೇಲಿನ ಆರೋಪಗಳನ್ನು ತಳ್ಳಿ ಹಾಕಿರುವುದರಿಂದ ಮತ್ತು ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕ ಇವರು ತಮ್ಮ ಮೇಲಿನ ಆಪಾದನೆಗಳಿಗೆ ಯಾವುದೇ ಹೇಳಿಕೆಯನ್ನು ಸಲ್ಲಿಸದಿರುವುದರಿಂದ, ಈ ಪ್ರಕರಣವನ್ನು ವಿಚಾರಣೆಗೊಳಪಡಿಸಿ, ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ತೀರ್ಮಾನಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 45 ತೋಸೇಪ 2004, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2004**

ಶ್ರೀ ಮಹಮ್ಮದ್ ಜಕಾವುಲ್ಲಾ, ಹಿರಿಯ ಸಹಾಯಕ ತೋಟಗಾರಿಕಾ ನಿರ್ದೇಶಕರು (ನಿವೃತ್ತ) ಹಾಗೂ ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕ, ಸಿಂಧನೂರು ಇವರುಗಳು ಈ ಹಿಂದೆ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ), ಮಾನ್ವಿ

ಹಾಗೂ ತೋಟಗಾರಿಕೆ ಸಹಾಯಕರು, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಾರ್ಯಾಲಯ (ರಾವ) ಮಾನ್ವಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ 1999-2000, 2002-03 ಮತ್ತು 2003-04ನೇ ಸಾಲಿನಲ್ಲಿ ಎಸ್-28 ಯೋಜನೆಯಡಿಯಲ್ಲಿ ಹಣದ ದುರುಪಯೋಗ ಮಾಡಿರುವುದು, ಸಸ್ಯಸಂರಕ್ಷಣಾ ಔಷಧಿ ಖರೀದಿಯಲ್ಲಿ ಅವ್ಯವಹಾರ, ಮಾನ್ವಿ ತೋಟಗಾರಿಕೆ ಕ್ಷೇತ್ರದ ತೆಂಗು, ಸಪೋಟಾ, ಮಾವು ಮತ್ತು ಸೀಬಿ ಫಸಲಿನ ಹರಾಜಿನ 3:4 ಭಾಗದ ಮೊತ್ತವನ್ನು ಪಡೆದು ಹಾಗೂ ಇಲಾಖಾ ವತಿಯಿಂದ ಮಾರಾಟ ಮಾಡಿದ ಮೊತ್ತವನ್ನು ಪಡೆದು ಸರ್ಕಾರಕ್ಕೆ ಜಮಾ ಮಾಡದೇ ಹಣ ದುರುಪಯೋಗಪಡಿಸಿಕೊಂಡು ಸರ್ಕಾರಕ್ಕೆ ನಷ್ಟ ಉಂಟು ಮಾಡಲು ಕಾರಣರಾಗಿರುವುದರಿಂದ, ಅವರೀರ್ವರ ಮೇಲೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11ನೇ ನಿಯಮದ 2ನೇ ಉಪ ನಿಯಮ ಮತ್ತು 3ನೇ ಉಪ ನಿಯಮದ (ಸಿ) ಖಂಡದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಎಂ. ನಟರಾಜಮೂರ್ತಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ವ್ಯವಸ್ಥಾಪಕರು (ಲೇಖನ ಸಾಮಗ್ರಿ), ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು, ವಿಚಾರಣೆಯನ್ನು ತೋಟಗಾರಿಕೆ ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿರುವ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು. ಹಾಗೆಯೇ ಸಂಬಂಧಿಸಿದ ಕಛೇರಿಗಳಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ: ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸುವುದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.6,000-00 (ಆರು ಸಾವಿರ ರೂ.ಗಳು ಮಾತ್ರ) ಸಂಚಿತ ಸಂಭಾವನೆಯನ್ನು ವಿಚಾರಣಾಧಿಕಾರಿಗಳು, ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ತೋಟಗಾರಿಕೆ ನಿರ್ದೇಶಕರು ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳ ಒಳಗಾಗಿ ಪೂರೈಸಿ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 904

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ವಿಷಯ:** ಶ್ರೀ ವಿ.ಬಿ.ಚೌಧರಿ, ತೋಟಗಾರಿಕೆ ಜಂಟಿ ನಿರ್ದೇಶಕರು (ನಿಲಂಬನೆ) ಮತ್ತು ಶ್ರೀ ಪಂಡಿತನೂಲ, ಸಹಾಯಕ ತೋಟಗಾರಿಕೆ ನಿರ್ದೇಶಕರು (ಅಮಾನತ್ತಿನಲ್ಲಿ) ಇವರ ಜೀವನಾಂಶ ಭತ್ಯೆಯನ್ನು ಶೇಕಡ 25 ಕ್ಕೆ ಇಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 168 ತೋಸೇಪ 97 ದಿನಾಂಕ 30.7.1997.
2. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 168 ತೋಸೇಪ 97 ದಿನಾಂಕ 4.2.2000.
3. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 168 ತೋಸೇಪ 97 ದಿನಾಂಕ 25.10.2000.
4. ಸರ್ಕಾರದ ಆದೇಶ ಸಂಖ್ಯೆ: AHD 84 HLM 2001 ದಿನಾಂಕ 13.2.2002.
5. ದಿನಾಂಕ 3.8.2004 ರಂದು ಅಮಾನತ್ತು ಪ್ರಕರಣಗಳನ್ನು ಪರಾಮರ್ಶಿಸುವ ಕುರಿತು ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶದನ್ವಯ ಶ್ರೀ ವಿ.ಬಿ.ಚೌಧರಿ, ತೋಟಗಾರಿಕೆ ಜಂಟಿ ನಿರ್ದೇಶಕರು, ಗುಲ್ಬರ್ಗಾ, ಶ್ರೀ ಎಂ.ಎ.ಸಿದ್ದಿಖಿ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ನಿವೃತ್ತ) ಮತ್ತು ಶ್ರೀ ಪಂಡಿತನೂಲ, ಸಹಾಯಕ ತೋಟಗಾರಿಕೆ ನಿರ್ದೇಶಕರು (ಪ್ರಭಾರ) ಇವರುಗಳು ನಾರಾಯಣಪುರ ತೋಟಗಾರಿಕೆ ಕ್ಷೇತ್ರದಲ್ಲಿ ತೋಟಗಾರಿಕೆ ಇಲಾಖೆಯ ರೂ.5.00 ಕೋಟಿ ಹಣವನ್ನು ದುರುಪಯೋಗಪಡಿಸಿಕೊಂಡಿದ್ದಾರೆಂದು ವರದಿಯಾದ ಹಿನ್ನಲೆಯಲ್ಲಿ ತನಿಖೆ/ವಿಚಾರಣೆ ಬಾಕಿಯಿರಿಸಿ ಇವರುಗಳನ್ನು ಅಮಾನತ್ತಿನಲ್ಲಿರಿಸಿ ಶೇಕಡ 50 ರಷ್ಟು ಜೀವನಾಂಶ ಭತ್ಯೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 98 ರನ್ವಯ ನೀಡಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (3) ರ ಸರ್ಕಾರಿ ಆದೇಶದಲ್ಲಿ ಶ್ರೀ ಪಂಡಿತನೂಲ, ಸಹಾಯಕ ತೋಟಗಾರಿಕೆ ನಿರ್ದೇಶಕರು (ಪ್ರಭಾರ) ನಾರಾಯಣಪುರ ತೋಟಗಾರಿಕೆ ಕ್ಷೇತ್ರ (ಅಮಾನತ್ತಿನಲ್ಲಿ) ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 98 ರನ್ವಯ ಜೀವನಾಂಶ ಭತ್ಯೆಯನ್ನು ಶೇಕಡ 50 ರಿಂದ ಶೇಕಡ 75 ಕ್ಕೆ ಏರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ (4) ರ ಆದೇಶದನ್ವಯ ಶ್ರೀ ವಿ.ಬಿ.ಚೌಧರಿ, ತೋಟಗಾರಿಕೆ ಜಂಟಿ ನಿರ್ದೇಶಕರು, (ಅಮಾನತ್ತಿನಲ್ಲಿ) ಇವರಿಗೆ ಈಗ ಪಡೆಯಲಾಗುತ್ತಿರುವ ಶೇಕಡ 50 ರಷ್ಟು ಜೀವನಾಂಶ ಭತ್ಯೆಯನ್ನೇ ಮುಂದಿನ ಆದೇಶದವರೆಗೆ ಮುಂದುವರಿಸಲಾಗಿದೆ.

ಅಮಾನತ್ತಿನಲ್ಲಿ ಮುಂದುವರಿಯುತ್ತಿರುವ ಶ್ರೀ ವಿ.ಬಿ.ಚೌಧರಿ, ತೋಟಗಾರಿಕೆ ಜಂಟಿ ನಿರ್ದೇಶಕರು, ಮತ್ತು ಶ್ರೀ ಪಂಡಿತನೂಲ, ಸಹಾಯಕ ತೋಟಗಾರಿಕೆ ನಿರ್ದೇಶಕರು ಇವರುಗಳ ಮೇಲಿನ ಆಪಾದನೆಗಳ ಬಗ್ಗೆ ಲೋಕಾಯುಕ್ತರು ತನಿಖೆ ನಡೆಸಿ ನೀಡಿದ ತನಿಖಾ ವರದಿಯಲ್ಲಿ ಅವರುಗಳ ಮೇಲಿನ ಆರೋಪಗಳು ಪ್ರಾಥಮಿಕ ತನಿಖೆಯಲ್ಲಿ ಸಾಬೀತಾಗಿರುವುದಾಗಿ ವರದಿ ಮಾಡಿರುತ್ತಾರೆ. ದಿನಾಂಕ 3.8.2004 ರಂದು ನಡೆದ ಅಮಾನತ್ತು ಪ್ರಕರಣಗಳ ಪರಾಮರ್ಶನದ ಸಭೆಯಲ್ಲಿ ಶ್ರೀ ವಿ.ಬಿ.ಚೌಧರಿ, ತೋಟಗಾರಿಕೆ ಜಂಟಿ ನಿರ್ದೇಶಕರು, (ನಿಲಂಬನೆ) ಮತ್ತು ಶ್ರೀ ಪಂಡಿತನೂಲ, ಸಹಾಯಕ ತೋಟಗಾರಿಕೆ ನಿರ್ದೇಶಕರು (ಪ್ರಭಾರೆ) (ನಿಲಂಬನೆ) ಇವರಿಗೆ ಈಗ ನೀಡಲಾಗುತ್ತಿರುವ ಜೀವನಾಂಶ ಭತ್ಯೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 98(1)(ಬಿ)(ii) ರನ್ವಯ ಶೇಕಡ 25ಕ್ಕೆ ಇಳಿಸಿ ಆದೇಶಿಸಲು ತೀರ್ಮಾನ ತೆಗೆದುಕೊಳ್ಳಲಾಯಿತು. ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 168 ತೋಸೇಪ 97 (ಭಾಗ-3) ಬೆಂಗಳೂರು, ದಿನಾಂಕ 20ನೇ ಆಗಸ್ಟ್ 2004**

ಶ್ರೀ ವಿ.ಬಿ.ಚೌಧರಿ, ತೋಟಗಾರಿಕೆ ಜಂಟಿ ನಿರ್ದೇಶಕರು, (ಅಮಾನತ್ತಿನಲ್ಲಿ) ಮತ್ತು ಶ್ರೀ ಪಂಡಿತನೂಲ, ಸಹಾಯಕ ತೋಟಗಾರಿಕೆ ನಿರ್ದೇಶಕರು (ಪ್ರಭಾರೆ) (ಅಮಾನತ್ತಿನಲ್ಲಿ) ನಾರಾಯಣಪುರ ತೋಟಗಾರಿಕೆ ಕ್ಷೇತ್ರ ಇವರಿಗೆ ಈಗ ಪಾವತಿಸಲಾಗುತ್ತಿರುವ ಜೀವನಾಂಶ ಭತ್ಯೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 98(1)(ಬಿ)(ii) ರಡಿಯಲ್ಲಿ ಅವರ ವೇತನದ ಶೇಕಡ 25 ಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಇಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎನ್. ಮಂಜುಳಗೀತ

ಪಿ.ಆರ್. 905 ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಹೆಚ್.ಜಯಪ್ಪ, ನಿವೃತ್ತ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಮತ್ತು ಇನ್ನಿತರೆ 6 ಅಧಿಕಾರಿ: ನೌಕರರ ಮೇಲಿನ ಆರೋಪಗಳಿಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿ2(1) ಪದೂ.38:2003–04 ದಿನಾಂಕ:30.4.2004
2. ಸೂಚನಾ ಪತ್ರ ಸಂಖ್ಯೆ:ಇಡಿ 53 ಡಿಜಿಡಿ 2004 ದಿನಾಂಕ:24.5.2004
3. ಪ್ರತಿರಕ್ಷಣಾ ಹೇಳಿಕೆ:– ಶ್ರೀ ಮಹಂತೇಶ, ಶ್ರೀ ಎಂ.ಅಯ್ಯಪ್ಪ, ದಿ:10.6.2004 ಶ್ರೀ ಕೃಷ್ಣಪ್ಪ, 9.6.2004, ಶ್ರೀ ದೊಡ್ಡಮನಿ, ದಿನಾಂಕ:9.6.2004, ಶ್ರೀ ಚಿಲಕದ, ದಿನಾಂಕ:9.6.2004, ಶ್ರೀ ಕರ್ಕಿಹಳ್ಳಿ, ದಿನಾಂಕ:9.6.2004, ಶ್ರೀ ಜಯಪ್ಪ, ದಿನಾಂಕ:12.6.2004

**ಪ್ರಸ್ತಾವನೆ:**

ಶ್ರೀ ಹೆಚ್.ಜಯಪ್ಪ, ನಿವೃತ್ತ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರು ಈ ಹಿಂದೆ ರಾಯಚೂರು ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಈ ಕೆಳಕಂಡ ಅಧಿಕಾರಿ ನೌಕರರೊಂದಿಗೆ ಭಾಗಿಯಾಗಿ ದಿನಾಂಕ:20.2.2004 ರಂದು ಎಸ್.ಎಸ್.ಎಲ್.ಸಿ. ಪೂರ್ವ ಸಿದ್ದತಾ ಪರೀಕ್ಷೆಯ ತಪಾಸಣೆಯ ನೆಪವನ್ನು ಹೂಡಿ ಸರ್ಕಾರಿ ಪ್ರೌಢಶಾಲೆ, ನೀರಮಾನ್ವಿ, ಇಲ್ಲಿಗೆ ಸಂದರ್ಶನ ನೀಡಿ ನಂತರ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ರಾಜಲಬಂಡ, ಮಾನ್ವಿ ತಾಲ್ಲೂಕ್, ಇಲ್ಲಿಗೆ ಮಧ್ಯಾಹ್ನ ಭೇಟಿ ನೀಡಿದಾಗ ಮಧ್ಯಾಹ್ನದ ಊಟಕ್ಕೆ ಸಂಬಂಧಿಸಿದಂತೆ ಅಹಿತಕರ ಘಟನೆ ನಡೆಯಲು ನೇರ ಕಾರಣರಾಗಿದ್ದಾರೆಂಬ ಆರೋಪದ ಮೇರೆಗೆ ಮೇಲೆ ಓದಲಾದ ಕ್ರಮಾಂಕ (2) ರಲ್ಲಿ ತಿಳಿಸಿದ ದಿನಾಂಕದಂದು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11 ರಡಿಯಲ್ಲಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ, ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು.

**ಅಧಿಕಾರಿ ನೌಕರರ ಹೆಸರು:**

1. ಶ್ರೀ ಡಿ.ಜಿ.ಕರ್ಕಿಹಳ್ಳಿ, ವಿಜ್ಞಾನ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
2. ಶ್ರೀ ವಿ.ಟಿ.ಚಿಲಕದ, ಕನ್ನಡ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
3. ಶ್ರೀ ಎಂ.ಎಂ.ದೊಡ್ಡಮನಿ, ಆಂಗ್ಲ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
4. ಶ್ರೀ ಕೃಷ್ಣಪ್ಪ, ಗಣಿತ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
5. ಶ್ರೀ ಎಂ.ಅಯ್ಯಪ್ಪ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ನೀರಮಾನ್ವಿ, ಮಾನ್ವಿ ತಾಲ್ಲೂಕ್, ರಾಯಚೂರು ಜಿಲ್ಲೆ,
6. ಶ್ರೀ ಮಹಂತೇಶ, ಸಹಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ರಾಜಲಬಂಡ, ಮಾನ್ವಿ ತಾಲ್ಲೂಕ್, ರಾಯಚೂರು ಜಿಲ್ಲೆ,

ಮೇಲೆ ನಮೂದಿಸಿರುವ ಶ್ರೀ ಹೆಚ್.ಜಯಪ್ಪ ಹಾಗೂ ಕ್ರಮ ಸಂಖ್ಯೆ (1) ರಿಂದ (5) ರಲ್ಲಿರುವ ಆಪಾದಿತರುಗಳು ಓದಲಾದ (3) ರಲ್ಲಿ ನಮೂದಿಸಿರುವ ದಿನಾಂಕಗಳಲ್ಲಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ಯಾವುದೇ ಅಹಿತಕರ ಘಟನೆಗೆ ಅವಕಾಶ ನೀಡಿಲ್ಲವೆಂದು, ಆದರೆ ಸದರಿ ದಿನಾಂಕದಂದು ಪ್ರಭಾರಿ ಮುಖ್ಯ ಶಿಕ್ಷಕರಾದ ಶ್ರೀ ಮಹಂತೇಶ ಇವರ ಪತ್ನಿಯ ವರ್ಗಾವಣೆಗೆ ಸಂಬಂಧಿಸಿದಂತೆ ಅನುಕೂಲವಾಗಿಲ್ಲ ಎಂಬ ದುರುದ್ದೇಶದಿಂದ ಇಂತಹ ಘಟನೆ ನಡೆಯಲು ಕಾರಣವಾಗಿದೆ ಎಂದು ತಿಳಿಸಿ, ಅವರುಗಳ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದಾರೆ. ಶ್ರೀ ಮಹಂತೇಶ ಪ್ರಭಾರಿ ಮುಖ್ಯ ಶಿಕ್ಷಕರು, ತಮ್ಮ ಮೇಲಿನ ಆರೋಪವನ್ನು ಅಲ್ಲಗಳೆದಿದ್ದಾರೆ.

ಆಪಾದಿತರ ಮೇಲಿನ ಆರೋಪಗಳು ಹಾಗೂ ಅವರುಗಳು ಸಲ್ಲಿಸಿದ್ದ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಆರೋಪದಲ್ಲಿರುವ ಸತ್ಯಾಂಶವನ್ನು ತಿಳಿಯುವುದು ಸೂಕ್ತವೆಂದು ನಿರ್ಧರಿಸಿ ಅವರುಗಳ ಮೇಲಿನ ಆರೋಪಗಳಿಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 53 ಡಿಜಿಡಿ 2004 ಬೆಂಗಳೂರು, ದಿನಾಂಕ: 20ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಕೆಳಕಂಡ ಅಧಿಕಾರಿ:ನೌಕರರ ಮೇಲಿನ ಆರೋಪಗಳಿಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 11 (2) ರಲ್ಲಿನ ಪ್ರದತ್ತವಾದ ಅಧಿಕಾರ ಚಲಾಯಿಸಿ, ಶ್ರೀ ಚಿದ್ರೆ ಶಂಕರಯ್ಯ ಸ್ವಾಮಿ, ವಿಭಾಗೀಯ ಕಾರ್ಯದರ್ಶಿ, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5)(ಸಿ) ಮೇರೆಗೆ ಶಿಕ್ಷಣಾಧಿಕಾರಿ, ವಿಭಾಗೀಯ ಕಾರ್ಯದರ್ಶಿ, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ

ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಿ ಆದೇಶಿಸಿದೆ.

**ಅಧಿಕಾರಿ ನೌಕರರ ಹೆಸರು:**

1. ಶ್ರೀ ಹೆಚ್.ಜಯಪ್ಪ, ನಿವೃತ್ತ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ,
2. ಶ್ರೀ ಡಿ.ಜಿ.ಕರ್ಕಿಹಳ್ಳಿ, ವಿಜ್ಞಾನ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
3. ಶ್ರೀ ವಿ.ಟಿ.ಚಿಲಕದ, ಕನ್ನಡ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
4. ಶ್ರೀ ಎಂ.ಎಂ.ದೊಡ್ಡಮನಿ, ಆಂಗ್ಲ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
5. ಶ್ರೀ ಕೃಷ್ಣಪ್ಪ, ಗಣಿತ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
6. ಶ್ರೀ ಎಂ.ಅಯ್ಯಪ್ಪ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ನೀರಮಾನ್ವಿ, ಮಾನ್ವಿ ತಾಲ್ಲೂಕ್, ರಾಯಚೂರು ಜಿಲ್ಲೆ,
7. ಶ್ರೀ ಮಹಂತೇಶ, ಸಹಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ರಾಜಲಬಂಡ, ಮಾನ್ವಿ ತಾಲ್ಲೂಕ್, ರಾಯಚೂರು ಜಿಲ್ಲೆ,

ವಿಚಾರಣಾಧಿಕಾರಿಗಳು ಪ್ರತಿಯೊಬ್ಬ ಆರೋಪಿತ ನೌಕರರ ಮೇಲಿನ ಆರೋಪಗಳಿಗೆ ಸಿಸಿಎ ನಿಯಮಗಳನ್ವಯ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು 2 ತಿಂಗಳೊಳಗಾಗಿ ತಪ್ಪದೆ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 906

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಸೇ-1,2)

## ಕಾನೂನು ಸಚಿವಾಲಯ

**ವಿಷಯ:** ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರ ಪ್ರಸ್ತಾವನೆಗಳು.

**ಪ್ರಸ್ತಾವನೆ:**

ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯು ಅವುಗಳ ಮುಂದೆ ಸೂಚಿಸಿರುವ ದಿನಾಂಕದಂದು ಪೂರ್ಣಗೊಂಡಿದ್ದು ಈ ನ್ಯಾಯಾಲಯಗಳಲ್ಲಿ ಅಧಿಕ ಪ್ರಕರಣಗಳು ಬಾಕಿ ಇರುವುದರಿಂದ ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಪೂರ್ಣಗೊಂಡ ದಿನಾಂಕದಿಂದ ಕಾಯಂಗೊಳಿಸಲು ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಕೋರಿದ್ದಾರೆ.

| ಕ್ರ. ಸಂ. | ನ್ಯಾಯಾಲಯದ ಹೆಸರು | ಪೂರ್ಣಗೊಂಡ ಅವಧಿ ದಿನಾಂಕ |
|---|---|---|
| 1 | 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಸಿಜೆಎಂ, ಧಾರವಾಡ. | 31-3-2004 |
| 2 | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಮದ್ದೂರು | 31-3-2004 |
| 3 | 4ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹುಬ್ಬಳ್ಳಿ | 31-3-2004 |
| 4 | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಆನೇಕಲ್ | 31-3-2004 |
| 5 | 1ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಬಾಗಲಕೋಟೆ | 31-3-2004 |
| 6 | 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಬಾಗಲಕೋಟೆ | 31-3-2004 |
| 7 | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಜಮಖಂಡಿ | 31-3-2004 |
| 8 | ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಬೀಳಗಿ | 31-3-2004 |
| 9 | ಜೆಎಂಎಫ್‌ಸಿ, ಮಂಡ್ಯ | 31-3-2004 |
| 10 | ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಸೌಂದತ್ತಿ | 31-3-2004 |
| 11 | 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಬೆಂಗಳೂರು ಗ್ರಾಮಾಂತರ ಜಿಲ್ಲೆ ಬೆಂಗಳೂರು | 31-3-2004 |
| 12 | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು ಮತ್ತು ಜೆಎಂಎಫ್‌ಸಿ, ಮಂಡ್ಯ | 31-3-2004 |
| 13 | ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಪಾಂಡವಪುರ | 31-3-2004 |

**ಸರ್ಕಾರಿ ಆದೇಶ ಸಂಖ್ಯೆ: ಲಾ 21 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ತಿಳಿಸಿರುವ 13 ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1-4-2004 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವೆರಡರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಮುಂದುವರಿಸಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ. ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 907

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ಸೇರ್ಪಡೆ ಆದೇಶ ಸಂಖ್ಯೆ:ಲಾ 95 ಎಲ್‌ಸಿಇ 2002, ಬೆಂಗಳೂರು, ದಿನಾಂಕ: 19ನೇ ಮೇ 2004**

ಸರ್ಕಾರಿ ಆದೇಶ ಸಂಖ್ಯೆ:ಲಾ 108 ಎಲ್‌ಸಿಇ 2003, ದಿನಾಂಕ 23-12-2003ರ ಆದೇಶ ಭಾಗದ ಪುಟ-2 ರಲ್ಲಿ ಶೋರಾಪುರದಲ್ಲಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯವನ್ನು 32 ಹುದ್ದೆಗಳೊಂದಿಗೆ ಸ್ಥಾಪಿಸಲು ಮಂಜೂರಾತಿ ನೀಡಿದ್ದು. ಈ ನ್ಯಾಯಾಲಯಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-ನ್ಯಾಯಪರಿಪಾಲನೆ-00-105-ವ್ಯವಹಾರ ಮತ್ತು ಸತ್ರ ನ್ಯಾಯಾಲಯಗಳು-0-01-ಸಿಬ್ಬಂದಿ ವೆಚ್ಚ-125-ಆಧುನೀಕರಣ-ಯೋಜನೇತರ" ಇದರ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 908

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-1)

**ವಿಷಯ:** ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರ ದಿನಾಂಕ:6-8-2004ರ ಅ.ಸ.ಪತ್ರ ಸಂಖ್ಯೆ:ಜಿಒಬಿ-2:67:2004.

**ಪ್ರಸ್ತಾವನೆ:**

ರಾಜ್ಯದಲ್ಲಿನ ಈ ಕೆಳಕಂಡ 5 ವಿವಿಧ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ:31-3-2004ಕ್ಕೆ ಅಂತ್ಯಗೊಂಡಿದ್ದು, ಈ ನ್ಯಾಯಾಲಯಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಪ್ರಕರಣಗಳು ಬಾಕಿ ಇರುವುದರಿಂದ, ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1.4.2004 ರಿಂದ 1 ವರ್ಷದ ಅವಧಿಗೆ ಮುಂದುವರೆಸಲು ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಕೋರಿದ್ದಾರೆ.

| ಕ್ರಮ ಸಂಖ್ಯೆ | ನ್ಯಾಯಾಲಯದ ಹೆಸರು |
|---|---|
| 1. | ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಹೊನ್ನಾಳಿ |
| 2. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ದಾವಣಗೆರೆ |
| 3. | ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ಚನ್ನಗಿರಿ |
| 4. | ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ವಿರಾಜಪೇಟೆ |
| 5. | ಜೆ.ಎಂ.ಎಫ್.ಸಿ. 2ನೇ ನ್ಯಾಯಾಲಯ, ದಾವಣಗೆರೆ. |

**ಸರ್ಕಾರಿ ಆದೇಶ ಸಂಖ್ಯೆ: ಲಾ 21 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ಹೆಸರಿಸಲಾದ ರಾಜ್ಯದ 5 ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಕಾರ್ಯಾವಧಿಯನ್ನು ದಿನಾಂಕ: 1.4.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 909

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1)

## HEALTH AND FAMILY WELFARE SECRETARIAT

**Subject:** Deputation of Dr.M.Shivalingaiah, Senior Specialist in Surgery working on deputation as Lecturer in Urology in Bangalore Medical College and Dr.K.S.Sadananda, Lecturer in Cardiology in Mysore Medical College, Mysore to acquire PG Super Speciality Courses.

**Read:**

1. Letter No.PGSSET/02/2003-2004, dated 10/11/2003 of the Rajiv Gandhi University of Health Sciences.
2. Letter No.MED (3) 5/2004-2005, dated 11/05/2004 of Director of Medical Education.
3. Notification No.PGSSET/3/01/2004-2005, dated 07/06/2004 published in the Newspaper dated 08/06/2004.
4. Letters No.PGSSET/3/2004-2005 dated 10/05/2004, 24/05/2004, 04/06/2004, 14/06/2004, 18/06/2004, 14/07/2004, and 20/07/2004 of the Registrar, Rajiv Gandhi University of Health Sciences. Bangalore.
5. Letter No.MEH (1)/10/2004-2005, dated 31/07/2004 of the Director of Medical Education.
6. Letter No.JRO 5 47/2004-2005, dated 30/07/2004 of the Commissioner for Health & Family Welfare services, Bangalore.

7. Govt.Order No.HFW 13 MPS 2004, dated 24/07/2004.
8. Notification No.UA/Syn/Ord/PGSSC/38/2002-2003, dated 26/07/2004 of the Rajiv Gandhi University of Health Sciences.
9. Letter No.PGSSET/3/Results/2004-2005, dated 30/07/2004 of the Registrar, Rajiv Gandhi University of Health Sciences, Bangalore.
10. O.M.No.BMC/PGS/327/2003-2004, dated 30/07/2004 of the Principal, Bangalore Medical College, Bangalore.
11. U.O.No.HFW 413 HSH 2004, dated 31/07/2004.

**PREAMBLE:**

1. Six Super Speciality Courses are in vogue in the Colleges affiliated to Rajiv Gandhi University of Health Sciences and selection of candidates for admission to such courses has been regulated in terms of MCI Post-Graduate Medical Education Regulation, 2000, Ordinance Governing conduct of Entrance Test for Admission to Post Graduate Super Speciality Courses 2002 in Medical Faculty and Karnataka Medical Colleges (Conduct of Entrance Test and Selection for Post Graduate Super Speciality Courses) Rules, 1991. Acute paucity of teachers in Government Medical Colleges which would result in closure of Super Speciality Courses became the greater concern to the RGUHS and the State Government. Hence with a view to sort out such a situation a meeting was held on 06/05/2004 in the RGUHS to consider those aspects. The recommendation was made to the Government to amend the admission rules to reserve 50% of the seats in PGSSCs to in-service candidates subject to their being qualified in the Entrance Test conducted by virtue of the said Ordinance. Since 2$^{nd}$ deputation is impermissible under KCSRs it became a stumbling block to in-service candidates who might have done their PG on 1$^{st}$ deputation. If a lecturer is working in a Super Speciality Department unless he is deputed for the 2$^{nd}$ time he may not get any opportunity to acquire MCh., or DM which would adversely affect his carrer advancement. It would have an adverse impact on the expansion of the Super Speciality department in Government Medical Colleges. Keeping all these perspectives in view 2$^{nd}$ deputation of in-service candidates working in Medical Education Department and Health & Family Welfare Services Department was considered in consultation with Finance Department and Law Department.

2. In the meantime, the Notification dated 07/06/2004 was published by the RGUHS in the leading newspapers inviting applications from eligible candidates for appearance to PGSSCET-2004 scheduled for 24/07/2004. In-service candidates were also eligible to apply for their appearance to Entrance Test subject to admission rules of the State Government. In Govt.Order dated 24/07/2004 Government had directed reservation of 50% of the total seats in PGSSCs in favour of in-service candidates holding the post of Lecturers/Assistant Professors/Professors in Medical Education Department and GDMOs, Specialists and Senior Specialists in Health & Family Welfare Services Department applicable from the academic year 2004-2005. It was indicated therein that modalites and parameters and the manner of deputation of such in-service candidates shall be as prescribed in the rules which would be promulgated in due course and RGUHS shall amend the said Ordinance suitably.

3. Concurrence of the Finance Department and Law Department was obtained for reservation of the 50% of the seats in PGSSCs for in-service candidates even on 2$^{nd}$ deputation. RGUHS was accordingly requested for preparation and publication of the seat matrix apportioning the 50% of the seats in favour of in-service candidates with a condition that if no suitable candidates were available such seats shall stand transferred to PGSSCET candidates. However, it was subject to their satisfying minimum academic eligibility criteria for admission also qualifying in the PGSSCET-2004. Acting on the decision of the Government amendment Ordinance governing conduct of Entrance Test for Admission to Post Graduate Super Speciality Courses 2002 was promulgated in the notification dated 26/07/2004. Provision has been made for reservation of 50% of the seats for in-service candidates and for preparation of separate merit list for such in-service candidates.

5. PGSSCET was held 24/07/2004 preponing it by one day. Viva Voce followed it for candidates who were qualified in the PGSSCET-2004. Select list of the candidates were published on 28/07/2004. Allotment Orders were issued to the selected candidates on 28/07/2004 directing them to report to the concerned Principal/Director of the Medical College/Autonomous Medical Institution latest by 31/07/2004 failing which their claim for the seat would be forfeited.

6. Dr.M.Shivalingaiah, Senior Specialist in General Surgery in Health & Family Welfare Services Department working on deputation as Lecturer in Urology in Bangalore Medical College and

Dr.K.S.Sadananda, Lecturer in Cardiology in Mysore Medical College, who had submitted their applications through proper channel have been selected and allotted for admission to M.Ch (Urology) in Bangalore Medical College, Bangalore and DM (Cardiology) at Sri Jayadeva Institute of Cardiology, Bangalore respectively from the academic year 2004-2005. They have requested for their relief effective from 30/07/2004 so as to enable them to join the course on 31/07/2004.

7. The Registrar, RGUHS has mentioned that in terms of the Govt.Order dated 24/07/2004 reserving 50% of the seats for PGSSCs for in-service candidates a seat matrix was published accordingly and candidates were allotted. He has requested to obtain an undertaking from the in-service candidates that they serve the Government for 10 years after completion of the PGSS Course.

8. Pending enactment of the Rules regulating deputation of the in-service candidates to Post Graduate Super Speciality Courses in Medical Colleges it is considered necessary to issue the Government Order deputing them to acquire the said MCh.,(Urology) and DM (Cardiology) from the academic year 2004-2005 subject to usual conditions of deputation except rendering the service to the Government after complete of Post Graduate Super Speciality Course.

9. It is considered necessary to depute the above in-service candidates to Post Graduate Super Speciality Courses pending enactment of the proposed rules.

**Government Order No.HFW 13 MPS 2004, Bangalore, Dated:16th August 2004**

10. Under rule 61 read with appendix II-A-I of KCSRs and in relaxation of sub-rule (7) of appendix II-A-I the following candidates selected and allotted to the College/Institution with effect from 31/08/2004 indicated against each for admission to Post Graduate Super Speciality Courses are deputed to the said Super Speciality Courses from the academic year 2004-2005.

| Sl.No. | Name, Designation and the Place of working of the in-service candidate | Course and the Institution to which the candidate is deputed |
|---|---|---|
| (1) | Dr.M.Shivalingaiah,<br>Senior Specialist in General Surgery working on deputation as Lecturer in Urology, Bangalore Medical College | M.Ch. (Urology) in Bangalore Medical College, Bangalore |
| (2) | Dr.K.S.Sadananda,<br>Lecturer in Cardiology, Mysore Medical College, Mysore. | DM (Cardiology) in Sri Jayadeva Institute of Cardiology, Bangalore. |

11. Deputation of above in-service candidates for Post Graduate Super Speciality Courses is subject to the strict condition that after completion of the period of deputation they shall continue to serve the Government in Medical Education Department and/or Health and Family Welfare Services Department as the case may be till their superannuation. They shall not be permitted to seek voluntary retirement or to tender resignation under any circumstances. They shall execute an agreement in the bond in form No.19 adverted hereinafter.

12. The above in-service candidates shall be abided by the rules regulating the deputation of Government servants for prosecution of Special Course of study consisting of higher studies as envisaged in appendix-II-A-I of KCSRs. They shall execute a bond on a stamp paper in form No.19 appended to the rules in the said appendix-II-A-I before they are relieved of their duties. They will have no option to retire from service voluntarily under the provisions of rule 285 Karnataka Civil Services Rules either during the period of deputation or before superannuation after expiry of the period of deputation. The words "three years" embodied in form No.19, wherever they occur shall be substituted by the words " till their retirement on attainment of superannuation". A copy of the bond so executed on a stamp paper shall be submitted to the Government and another copy preserved in the Directorate of Medical Education/Directorate of Health & Family Welfare Services permanently.

13. During the duration of their Post Graduate Super Speciality Courses they shall discharge the duties as Lecturer in the concerned institution concurrently.

14. The above in-service candidates shall be on their own pay and grade co-terminus with the tenure of the deputation/2$^{nd}$ deputation for Post Graduate Super Speciality Courses. During the period of deputation they shall be eligible to draw the basic pay, dearness allowance, house rent allowance and city compensatory allowance which they would have drawn but for their deputation for higher/specilised studies in Post Graduate Super Speciality Courses.

15. This order issues with the concurrence of Finance Department vide U.O.Note No.FD 443 Ser-4/2004, dated 11/06/2004

By Order and in the name of the Governor of Karnataka
**K.V.NANJUNDE GOWDA**
Deputy Secretary to Government,
Health & Family Welfare Department, (Medical Education)

PR 910

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 164 ಸಅಸೇ 2004 (1), ಬೆಂಗಳೂರು, ದಿನಾಂಕ: 16ನೇ ಆಗಸ್ಟ್ 2004**

**ವಿಷಯ:** ಮುಖ್ಯ ಮಂತ್ರಿಯವರ ಪತ್ರಿಕಾ ಕಾರ್ಯದರ್ಶಿಯವರ ಒಂದು ಗ್ರೂಪ್ 'ಬಿ' ಹುದ್ದೆಯನ್ನು ರೂ.9580 - 14200ರ ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 178 ಸಿಶಾಸೇ 91 ದಿನಾಂಕ: 8.4.1991.

ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸೃಜಿಸಲಾದ ಮುಖ್ಯಮಂತ್ರಿಯವರ ಪತ್ರಿಕಾ ಕಾರ್ಯದರ್ಶಿಯವರ ಕಛೇರಿಯಲ್ಲಿ ಒಂದು ಗ್ರೂಪ್ 'ಬಿ' ಹುದ್ದೆಯನ್ನು ದಿನಾಂಕ: 28.5.2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಮಾನ್ಯ ಮುಖ್ಯ ಮಂತ್ರಿಯವರ ಪದಾವಧಿಯವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರೂ.9580-260-10880-320-13440-380-14200ರ ವೇತನ ಶ್ರೇಣಿಯ ಗ್ರೂಪ್ 'ಎ' ಹುದ್ದೆಯೆಂದು ಉನ್ನತೀಕರಿಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1185:ವೆಚ್ಚ-5:2004, ದಿನಾಂಕ: 29.7.2004ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

ಪಿ.ಆರ್. 911

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ರೇಷ್ಮೆ ಇಲಾಖೆಯ ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆ, ವಿಜಯಪುರ ಅವ್ಯವಹಾರ ಶಿಸ್ತು ಕ್ರಮ ಜಂಟಿ ವಿಚಾರಣೆ ಮಂಡನಾಧಿಕಾರಿಗಳ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ವಾಕೈ 97 ರೇಸೇವಿ 03, ದಿನಾಂಕ: 11.3.2004.

2 ರೇಷ್ಮೆ ಉಪ ನಿರ್ದೇಶಕರು ಹಾಗೂ ಮಂಡನಾಧಿಕಾರಿ ರೇಷ್ಮೆ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ: ರೇಹನಿ/ಅ.ಶಾಖೆ/ವಿ.ಪುರ/ವಿಚಾರಣೆ/03-04, ದಿನಾಂಕ: 17.7.2004.

**ಪ್ರಸ್ತಾವನೆ:**

ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ ವಿಜಯಪುರ ಇಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಸತ್ಯಾಸತ್ಯತೆಗಳನ್ನು ಕಂಡು ಹಿಡಿಯಲು ಜಂಟಿ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ರೇಷ್ಮೆ ಅಪರ ನಿರ್ದೇಶಕರು, ರೇಷ್ಮೆ ಇಲಾಖೆ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ರೇಷ್ಮೆ ಉಪ ನಿರ್ದೇಶಕರು (ಬೀಜೋತ್ಪಾದನೆ ಮತ್ತು ಕೃಷಿ ಕ್ಷೇತ್ರಗಳು) ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿಯೂ ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿರುತ್ತದೆ.

ಈಗ ರೇಷ್ಮೆ ಉಪ ನಿರ್ದೇಶಕರು ಹಾಗೂ ಮಂಡನಾಧಿಕಾರಿ, ಕೇಂದ್ರ ಕಛೇರಿ, ಬೆಂಗಳೂರು, ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ತಾವು ಎಸ್.ಪಿ.ಎಸ್.ಎಫ್., ಶಾಖೆಯ ಎಲ್ಲಾ ಕೇಸ್‌ಗಳ ಜೊತೆಗೆ ಬಿತ್ತನೆ ವಲಯದ ಪತ್ರ ವ್ಯವಹಾರಗಳ ಕಡತಗಳೂ ಅಲ್ಲದೆ ಜೈಕಾ ಕಾರ್ಯಕ್ರಮದ ಮೇಲ್ವಿಚಾರಣೆಯನ್ನು ನೋಡುತ್ತಿರುವುದರಿಂದ ಕೆಲಸದ ಒತ್ತಡ ಹೆಚ್ಚಾಗಿದೆ ಎಂದು ತಿಳಿಸಿ ತಮ್ಮ ಬದಲಿಗೆ ಇಲಾಖೆಯಲ್ಲಿನ ಯಾರಾದರೂ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲು ಕೋರಿದ್ದಾರೆ.

ಈ ಸಂಬಂಧ ಸರ್ಕಾರವು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 97 ರೇಸೇವಿ 2003, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2004**

ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆ, ವಿಜಯಪುರ, ಇಲ್ಲಿ ರೇಷ್ಮೆಗೂಡಿಗೆ ನೀಡುವ ಪ್ರೋತ್ಸಾಹಧನದ ವಿತರಣೆಯಲ್ಲಿ ನಡೆಯಿತೆನ್ನಲಾದ ಅವ್ಯವಹಾರಗಳ ಕುರಿತಂತೆ ಕರ್ನಾಟಕ ನಾಗರೀಕ ಸೇವೆ (ಸಿ.ಸಿ.ಎ) ನಿಯಮಗಳು 1957ರ ನಿಯಮ 11 (5) (ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಿಚಾರಣೆಯಲ್ಲಿ ಮಂಡನಾಧಿಕಾರಿಯಾಗಿ ಆದೇಶ ಸಂಖ್ಯೆ ವಾಕೈ 97 ರೇಸೇವಿ 2003 ದಿನಾಂಕ: 11.3.2004ರಲ್ಲಿ ನೇಮಿಸಲಾಗಿದ್ದ ರೇಷ್ಮೆ ಉಪ ನಿರ್ದೇಶಕರು (ಬೀಜೋತ್ಪಾದನೆ ಮತ್ತು ಕೃಷಿ ಕ್ಷೇತ್ರಗಳು) ಇವರ ಬದಲಿಗೆ ಪತ್ರಾಂಕಿತ ವ್ಯವಸ್ಥಾಪಕರು-2 (ಶಿಸ್ತು ವಿಭಾಗ) ಕೇಂದ್ರ ಕಛೇರಿ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿದೆ.

ಸದರಿ ವಿಚಾರಣೆಯನ್ನು ಆದ್ಯತೆಯ ಮೇರೆಗೆ ತ್ವರಿತವಾಗಿ ಪೂರ್ಣಗೊಳಿಸಿ ವಿಚಾರಣೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮಂಜೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ರೇಷ್ಮೆ)

ಪಿ.ಆರ್. 912

## ಕಂದಾಯ ಸಚಿವಾಲಯ

**ವಿಷಯ:** ಶಿವಮೊಗ್ಗ ನಗರ ಸಮುದಾಯ ಅಭಿವೃದ್ದಿ ಸಂಘ, ಸ್ವರ್ಣ ಜಯಂತಿ ರೋಜಗಾರ್ ಯೋಜನೆ, ನಗರ ಸಭೆ ಕಾರ್ಯಾಲಯ, ಶಿವಮೊಗ್ಗ ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 28 ಮುನೋಸೊ 2003, ದಿನಾಂಕ: 9.10.2003.

2 ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ರವರ ಪತ್ರ ಸಂಖ್ಯೆ:ಶಿಜಿನಕೋ:ಪಿಓ:ಯುಪಿಎ:ಸ್ವಜ:ಸಾಅ.ಸ-1:2003-04, ದಿನಾಂಕ:11.5.2004.

**ಪ್ರಸ್ತಾವನೆ:**

ಶಿವಮೊಗ್ಗ ನಗರ ಸಮುದಾಯ ಅಭಿವೃದ್ದಿ ಸಂಘ, ಸ್ವರ್ಣ ಜಯಂತಿ ರೋಜಗಾರ್ ಯೋಜನೆ ನಗರ ಸಭೆ ಕಾರ್ಯಾಲಯ, ಶಿವಮೊಗ್ಗ ಈ ಸಂಸ್ಥೆಯು 1998ರಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ ಪ್ರಕಾರ ನೋಂದಾಯಿಸಿದ್ದು, ಇಲ್ಲಿಯವರೆಗೂ ಸರ್ವಸದಸ್ಯರ ಸಭೆ, ಕಾರ್ಯಕಾರಿ ಮಂಡಳಿ ಪಟ್ಟಿ ಹಾಗೂ ಸಂಸ್ಥೆಯ ಲೆಕ್ಕ ಪತ್ರಗಳನ್ನು ಒಪ್ಪಿಸದೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆಯ ಕಲಂ 11,12 ಮತ್ತು 13ರ ಉಲ್ಲಂಘನೆಯಾಗಿರುವುದರಿಂದ, ಸಂಸ್ಥೆಯನ್ನು ಸರಿದಾರಿಗೆ ತರುವ ದೃಷ್ಟಿಯಿಂದ ಮೇಲೆ ಓದಲಾದ (1)ರ ಆದೇಶದಲ್ಲಿ ಉಪ ವಿಭಾಗಾಧಿಕಾರಿ, ಶಿವಮೊಗ್ಗ ಇವರನ್ನು ಆಡಳಿತಾಧಿಕಾರಿಯನ್ನಾಗಿ ಮೇಲ್ಕಂಡ ಸಂಸ್ಥೆಗೆ ನೇಮಕ ಮಾಡಲಾಗಿತ್ತು. ಆಡಳಿತಾಧಿಕಾರಿ ಅವಧಿಯು ದಿನಾಂಕ:8.4.2004ಕ್ಕೆ ಮುಕ್ತಾಯವಾಗಿದ್ದು, ಸಾರ್ವತ್ರಿಕ ಚುನಾವಣಾ ಪ್ರಕ್ರಿಯೆಯಿದ್ದ ಕಾರಣ ಸಂಘಕ್ಕೆ ಚುನಾವಣೆಯನ್ನು ನಡೆಸಲು ಸಾಧ್ಯವಾಗದಿದ್ದರಿಂದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:9.4.2004 ರಿಂದ ಮತ್ತೆ 6 ತಿಂಗಳ ಅವಧಿಗೆ ಮುಂದುವರಿಸುವಂತೆ ಜಿಲ್ಲಾಧಿಕಾರಿಗಳು, ಶಿವಮೊಗ್ಗರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಸದರಿ ಪತ್ರವನ್ನು ಸರ್ಕಾರವು ಪರಿಶೀಲಿಸಿದ್ದು, ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 28 ಮುನೋಸೊ 2003, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿವಮೊಗ್ಗ ನಗರ ಸಮುದಾಯ ಅಭಿವೃದ್ದಿ ಸಂಘ, ಸ್ವರ್ಣ ಜಯಂತಿ ರೋಜಗಾರ್ ಯೋಜನೆ, ನಗರ ಸಭೆ ಕಾರ್ಯಾಲಯ, ಶಿವಮೊಗ್ಗ ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ-27ಎ ಪ್ರಕಾರ, ಸಾರ್ವಜನಿಕ ಹಿತದೃಷ್ಟಿಯಿಂದ, ದಿನಾಂಕ:9.4.2004 ರಿಂದ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ನಿಗದಿತ ಅವಧಿಯ ಒಳಗೆ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 913

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಬೆಳಗಾಂ ಜಿಲ್ಲೆ, ಚಿಕ್ಕೋಡಿ ತಾಲ್ಲೂಕಿನ ಸದಲಗಾ ಪಟ್ಟಣದ ಉಪ ನೋಂದಣಿ ಕಛೇರಿ ಸಿಬ್ಬಂದಿ ನಿಯೋಜನೆಯನ್ನು ಮುಂದುವರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಕಂಇ 69 ಮುನೋಸ 2001, ದಿನಾಂಕ:11.6.2001.

2 ಸರ್ಕಾರಿ ಆದೇಶ ಸಂಖ್ಯೆ:ಕಂಇ 13 ಮುನೋಸ 2003, ದಿನಾಂಕ:4.8.2003.

3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬ್ಬಂದಿ:1-103:2001-02, ದಿನಾಂಕ:27.7.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಬೆಳಗಾವಿ ಜಿಲ್ಲೆ, ಚಿಕ್ಕೋಡಿ ತಾಲ್ಲೂಕು, ಸದಲಗಾ ಪಟ್ಟಣದಲ್ಲಿ, ಸಾರ್ವಜನಿಕ ಹಿತದೃಷ್ಟಿಯಿಂದ, ಉಪ ನೋಂದಣಿ ಕಛೇರಿಯನ್ನು ಹೊಸದಾಗಿ ಪ್ರಾರಂಭ ಮಾಡಲು ಅನುಮತಿ ನೀಡಲಾಗಿದ್ದು, ಸದರಿ ಉಪ ನೋಂದಣಿ ಕಛೇರಿ ಕರ್ತವ್ಯಗಳಿಗೆ ಸಿಬ್ಬಂದಿಯನ್ನು 2 ವರ್ಷಗಳ ಅವಧಿಗೆ ನಿಯೋಜನೆಯ ಮೇರೆಗೆ ಭರ್ತಿ ಮಾಡಲು ಅನುಮತಿ ನೀಡಲಾಗಿತ್ತು. ಸದರಿ ಉಪ ನೋಂದಣಾಧಿಕಾರಿಯವರ ಕಛೇರಿಯಿಂದ ಸರ್ಕಾರಕ್ಕೆ ಹೆಚ್ಚಿನ ರಾಜಸ್ವ ಸಂಗ್ರಹವಾಗುತ್ತಿದ್ದುದರಿಂದ ಸಿಬ್ಬಂದಿಯ ನಿಯೋಜನಾ ಅವಧಿಯನ್ನು ದಿನಾಂಕ: 12.6.2003 ರಿಂದ 1 ವರ್ಷದ ಅವಧಿಗೆ ಮೇಲೆ ಓದಲಾದ-(2)ರ ಆದೇಶದಲ್ಲಿ ಮುಂದುವರಿಸಲಾಗಿತ್ತು. ಸದರಿ ಅವಧಿಯು ದಿನಾಂಕ:11.6.2004ಕ್ಕೆ ಮುಕ್ತಾಯವಾಗಿರುತ್ತದೆ.

ಮೇಲೆ ಓದಲಾದ (3)ರಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರು ಪ್ರಸ್ತಾವನೆ ಸಲ್ಲಿಸಿ, ಸದಲಗಾ ಉಪ ನೋಂದಣಿ ಕಛೇರಿಯು ಪ್ರಾರಂಭವಾದ ದಿನದಿಂದ, ಸದರಿ ಕಛೇರಿಯಿಂದ ಸರ್ಕಾರಕ್ಕೆ ರಾಜಸ್ವ ಪ್ರಗತಿಯು ಸಮಾನ ಅನುಪಾತದಲ್ಲಿ ಹೆಚ್ಚುವರಿಯಾಗುತ್ತಿರುವುದರಿಂದ ಮತ್ತು ಹೆಚ್ಚಿನದಾಗಿ ಸಾರ್ವಜನಿಕರಿಗೆ ಅನುಕೂಲವಾಗುತ್ತಿರುವುದರಿಂದ, ಮೇಲೆ ಓದಲಾದ (1)ರ ಆದೇಶದಲ್ಲಿ ಸೃಜಿಸಲಾದ ಹಂಗಾಮಿ ಹುದ್ದೆಗಳನ್ನು ದಿನಾಂಕ:12.6.2004 ರಿಂದ 2 ವರ್ಷಗಳ ಅವಧಿಗೆ ಮುಂದುವರಿಸುವಂತೆ ಕೋರಿರುತ್ತಾರೆ.

